KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಮಾರ್ಚ್ ೧೫, ೨೦೦೭ (ಫಾಲ್ಗುಣ ೨೪, ಶಕ ವರ್ಷ ೧೯೨೮) | ಸಂಚಿಕೆ ೧೧ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಸಣ್ಣ ನೀರಾವರಿ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಜಲಸಂಪನ್ಮೂಲ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸನಿಇ 63 ಸೇಎಸು 2006, ದಿ: 22.12.06.

**ಪ್ರಸ್ತಾವನೆ:**

ಮೇಲೆ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಜಲಸಂಪನ್ಮೂಲ ಇಲಾಖೆಯು, ಸದರಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸಣ್ಣ ನೀರಾವರಿ ವಿಭಾಗವು ರಾಜ್ಯದಲ್ಲಿನ ಸಣ್ಣ ನೀರಾವರಿ ಕಾಮಗಾರಿಗಳ ಸಮೀಕ್ಷೆ, ನಿರ್ಮಾಣ ಮತ್ತು ನಿರ್ವಹಣೆಗೆ ಸಂಬಂಧಿಸಿದ ಕಾಮಗಾರಿಗಳ ಮೇಲುಸ್ತುವಾರಿ ಹಾಗೂ ಸಣ್ಣ ನೀರಾವರಿ ಇಲಾಖೆಗೆ ಹಂಚಿಕೆಯಾಗಿರುವ ಕೆಲಸ ಕಾರ್ಯಗಳ ನಿರ್ವಹಣೆ ಮಾಡುತ್ತಿರುವುದರಿಂದ ಕಾರ್ಯದರ್ಶಿ [ಸಣ್ಣ ನೀರಾವರಿ], ಜಲ ಸಂಪನ್ಮೂಲ ಇಲಾಖೆ ಈ ಹುದ್ದೆಯನ್ನು ಪೂರಕ ಸಿಬ್ಬಂದಿಯೊಂದಿಗೆ ದಿನಾಂಕ: 01/01/2007ರಿಂದ ಎರಡು ವರ್ಷಗಳವರೆಗೆ ಮುಂದುವರಿಸಲು ಕೋರಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 88 ಸಸಿವಿ 2006, ಬೆಂಗಳೂರು, ದಿನಾಂಕಃ 5ನೇ ಜನವರಿ 2007**

ಸರ್ಕಾರದ ಕಾರ್ಯದರ್ಶಿ (ಸಣ್ಣ ನೀರಾವರಿ) ಜಲಸಂಪನ್ಮೂಲ ಇಲಾಖೆ, ಈ ಹುದ್ದೆಯನ್ನು ಪೂರಕ ಸಿಬ್ಬಂದಿ ವರ್ಗದೊಂದಿಗೆ ದಿನಾಂಕಃ 1.1.2007 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | | |
|---|---|---|
| ಅ. | ಕಾರ್ಯದರ್ಶಿ, ಸಣ್ಣ ನೀರಾವರಿ ಹಾಗೂ ಅಂತರ್ಜಲ (ಭಾರತೀಯ ಆಡಳಿತ ಸೇವೆ ಸೂಪರ್ ಟೈಂ ಸ್ಕೇಲ್ ಹುದ್ದೆ). | 1 ಹುದ್ದೆ |
| | ಆಪ್ತ ಸಿಬ್ಬಂದಿ | |
| ಅ) | ಶೀಘ್ರಲಿಪಿಗಾರರು | 2 ಹುದ್ದೆಗಳು |
| ಆ) | ಭಾಷಾಂತರಕಾರರು | 1 ಹುದ್ದೆ |
| ಇ) | ಕಿರಿಯ ಸಹಾಯಕರು | 1 ಹುದ್ದೆ |
| ಈ) | ಚಾಲಕರು | 1 ಹುದ್ದೆ |
| ಉ) | ದಲಾಯತ್ | 2 ಹುದ್ದೆಗಳು |

ಈ ಆದೇಶವನ್ನು ಸಂಖ್ಯೆಃ ಆಇ 1 ಟಿಎಫ್‌ಪಿ/96, ದಿನಾಂಕಃ 10.7.1996 ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

ಪಿ.ಆರ್. 175

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** 2006–07ನೇ ಸಾಲಿಗೆ ಮೆಟ್ರಿಕ್ ನಂತರ ಹಾಗೂ ಮೆಟ್ರಿಕ್ ಪೂರ್ವ ಬಾಲಕ/ಬಾಲಕಿಯರ ಹೊಸ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಮಾನ್ಯ ಸಮಾಜ ಕಲ್ಯಾಣ ಸಚಿವರ ಟಿಪ್ಪಣಿ ಸಂಖ್ಯೆ: ಸಕಸ/ಟಿ/2049/06, ದಿನಾಂಕ: 10.11.2006.

2) ನಿರ್ದೇಶಕರು ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: ಪವಕನಿ/ ಇಡಿ–2, ಸಿಆರ್–01/2006–07, ದಿನಾಂಕ: 21.11.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ 2006–07ನೇ ಸಾಲಿನ ಆಯವ್ಯಯ ಭಾಷಣದ ಘೋಷಣದನ್ವಯ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ 2006–07 ರಲ್ಲಿಯೇ ಡಾ: ಎಸ್.ಎಂ.ನಂಜುಂಡಪ್ಪನವರ ವರದಿಯಲ್ಲಿ ಗುರುತಿಸಿರುವ ರಾಜ್ಯದ ಅತ್ಯಂತ ಹಿಂದುಳಿದಿರುವ 29 ತಾಲ್ಲೂಕುಗಳಲ್ಲಿ 10 ಪರಿಶಿಷ್ಟ ವರ್ಗದ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಲು ಉದ್ದೇಶಿಸಲಾಗಿದೆ. ಸದರಿ 10 ವಿದ್ಯಾರ್ಥಿನಿಲಯಗಳ ಜೊತೆಗೆ ಅತ್ಯವಶ್ಯವಾಗಿ ಪ್ರಾರಂಭಿಸಬೇಕಾಗಿರುವ ಇನ್ನೂ 15 ವಿದ್ಯಾರ್ಥಿನಿಲಯಗಳನ್ನು ಮಂಜೂರು ಮಾಡಲು ಕೋರಿರುತ್ತಾರೆ. ಒಟ್ಟು 10 ವಿದ್ಯಾರ್ಥಿನಿಲಯಗಳಿಗೆ ತಗಲುವ ವಾರ್ಷಿಕ ವೆಚ್ಚ ರೂ.55.04 ಲಕ್ಷಗಳಾಗುತ್ತದೆ. 2006–07ನೇ ಸಾಲಿನಲ್ಲಿ ರಾಜ್ಯವಲಯ ಯೋಜನಾ ಲೆಕ್ಕ ಶೀರ್ಷಿಕೆ 2225–02–277–0–35 ರಡಿ ಹೊಸ ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸಲು ತಗಲುವ ನಿರ್ವಹಣಾ ವೆಚ್ಚ ಭರಿಸಲು ರೂ.80.00 ಲಕ್ಷಗಳನ್ನು ನಿಗದಿಪಡಿಸಲಾಗಿದೆ. ಈ ಅನುದಾನದಲ್ಲಿ ಈಗಾಗಲೇ ಮಂಜೂರು ಮಾಡಲಾಗಿರುವ 10 ವಿದ್ಯಾರ್ಥಿನಿಲಯಗಳ ನಿರ್ವಹಣಾ ವೆಚ್ಚ ರೂ.55.00 ಲಕ್ಷಗಳನ್ನು ಭರಿಸಿದರೂ ಇನ್ನೂ 25.00 ಲಕ್ಷ ಅನುದಾನ ಉಳಿಕೆಯಾಗುವುದು. ಸದರಿ ಅನುದಾನದಲ್ಲಿ ಈ ಕೆಳಕಂಡ ವಿದ್ಯಾರ್ಥಿನಿಲಯಗಳ ನಿರ್ವಹಣಾ ವೆಚ್ಚವನ್ನು ಭರಿಸಿ ಸಿಬ್ಬಂದಿ ಸಮೇತ ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ. ಸಂ. | ಮಂಜೂರಾಗಬೇಕಾದ ಸ್ಥಳ | ಕ್ಷೇತ್ರ/ತಾಲ್ಲೂಕು | ಮೆಟ್ರಿಕ್ ಪೂರ್ವ/ ಮೆಟ್ರಿಕ್ ನಂತರ ಬಾಲಕ/ಬಾಲಕಿಯರು |
|---|---|---|---|
| 1 | ಬಂಡಳ್ಳಿ | ಹನೂರು/ಕೊಳ್ಳೆಗಾಲ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ |
| 2 | ಕೊಳ್ಳೆಗಾಲ ಟೌನ್ | ಕೊಳ್ಳೆಗಾಲ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ |
| 3 | ಕೊಗನೂರು | ಶಿರಹಟ್ಟಿ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ |
| 4 | ಗಜೇಂದ್ರಗಡ | ರೋಣ | ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ ನಿಲಯ |

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಸಕಇ 220 ಪವಯೋ 2006, ಬೆಂಗಳೂರು, ದಿನಾಂಕ: 8ನೇ ಜನವರಿ 2007**

ಈ ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ 2006–07ನೇ ಸಾಲಿಗೆ ಪರಿಶಿಷ್ಟ ವರ್ಗದ 4 ವಿದ್ಯಾರ್ಥಿನಿಲಯಗಳನ್ನು ಈ ಕೆಳಗೆ ನಮೂದಿಸಿರುವ ಸ್ಥಳಗಳಲ್ಲಿ ಹುದ್ದೆಗಳ ಸಮೇತ ಹೆಚ್ಚುವರಿ ಹಣ ಕೋರದೆ ಇರುವ ಷರತ್ತಿನೊಂದಿಗೆ ಹಾಗೂ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಲ್ಲಿ ಅಕೌಂಟೆಂಟ್ ಮತ್ತು ವಾಚಮನ್ (ಕಾವಲುಗಾರ) ಹೊರತುಪಡಿಸಿ ಪ್ರಾರಂಭಿಸಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಮಂಜೂರಾಗಬೇಕಾದ ಸ್ಥಳ | ಕ್ಷೇತ್ರ/ತಾಲ್ಲೂಕು | ಮೆಟ್ರಿಕ್ ಪೂರ್ವ/ ಮೆಟ್ರಿಕ್ ನಂತರ ಬಾಲಕ/ಬಾಲಕಿಯರು |
|---|---|---|---|
| 1 | ಬಂಡಳ್ಳಿ | ಹನೂರು/ಕೊಳ್ಳೆಗಾಲ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ |
| 2 | ಕೊಳ್ಳೆಗಾಲ ಟೌನ್ | ಕೊಳ್ಳೆಗಾಲ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ |
| 3 | ಕೊಗನೂರು | ಶಿರಹಟ್ಟಿ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯ |
| 4 | ಗಜೇಂದ್ರಗಡ | ರೋಣ | ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ ನಿಲಯ |

ಈ ವೆಚ್ಚವನ್ನು 2006–07ನೇ ಸಾಲಿನ ರಾಜ್ಯವಲಯ ಲೆಕ್ಕಶೀರ್ಷಿಕೆ "2225–02–277–0–35 ವಿದ್ಯಾರ್ಥಿನಿಲಯಗಳನ್ನು ತೆರೆಯಲು (ಯೋಜನೆ)" ಕಾರ್ಯಕ್ರಮದಡಿ ಒದಗಿಸಿರುವ ಅನುದಾನದಲ್ಲಿ ಭರಿಸಬಹುದಾಗಿದ್ದು, ಸದರಿ ವಿದ್ಯಾರ್ಥಿನಿಲಯಗಳು ಸ್ಥಾಪನೆಯಾದ ನಂತರ ಹಣ ಬಿಡುಗಡೆಗಾಗಿ ಸರ್ಕಾರಕ್ಕೆ ಪ್ರತ್ಯೇಕ ಪ್ರಸ್ತಾವನೆ ಕಳುಹಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್.ಡಿ. 555 ವೆಚ್ಚ–3 2006 ದಿನಾಂಕ: 29.12.2006 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಬಾಟೆ**

ಪಿ.ಆರ್. 76 ಸರ್ಕಾರದ ಉಪ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ಗುಂಪು-ಎ ಮತ್ತು ಗುಂಪು-ಬಿ ಅಧಿಕಾರಿಗಳ ಸೇವೆಯನ್ನು ಹಿಂಪಡೆದು ಸ್ಥಳನಿಯುಕ್ತಿಗೊಳಿಸುವ ಕುರಿತು.

**ಪ್ರಸ್ತಾವನೆ:**

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಗುಂಪು-ಎ ಮತ್ತು ಗುಂಪು-ಬಿ ಅಧಿಕಾರಿಗಳು ಸರ್ಕಾರದ ಇತರ ಇಲಾಖೆ : ಸಂಸ್ಥೆಗಳಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವುದರಿಂದ ಇಲಾಖೆಯಲ್ಲಿನ ಹುದ್ದೆಗಳು ಖಾಲಿ ಇದ್ದು ಸರ್ಕಾರದ ಕಾರ್ಯಕ್ರಮಗಳ ಹಾಗೂ ಯೋಜನೆಗಳ ಅನುಷ್ಠಾನ ಕುಂಠಿತಗೊಂಡಿರುತ್ತದೆ. ಇದರಿಂದಾಗಿ ಶಿಶು ಅಭಿವೃದ್ಧಿ ಯೋಜನೆಗಳ ಅನುಷ್ಠಾನ ಹಾಗೂ ಸುಧಾರಣಾ ಸಂಸ್ಥೆಗಳ ಪರಿವೀಕ್ಷಣೆ ಹಾಗೂ ಮೇಲ್ವಿಚಾರಣೆಗೆ ಅಡಚಣೆ ಉಂಟಾಗಿರುತ್ತದೆ. ವೃತ್ತಿನಿರತ ವಿದ್ಯಾರ್ಹತೆ ನಿಗದಿಪಡಿಸಿರುವ ಹಾಗೂ ತರಬೇತಿ ಪಡೆದಿರುವ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳ ಸೇವೆಯು ಇಲಾಖೆಗೆ ಅತ್ಯವಶ್ಯಕವಾಗಿರುವುದರಿಂದ ನಿಯೋಜನೆ ಮೇಲೆ ತೆರಳಿರುವ ಅಧಿಕಾರಿಗಳ ಸೇವೆಯನ್ನು ಹಿಂಪಡೆದು ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳಿಗೆ ಸ್ಥಳನಿಯುಕ್ತಿಗೊಳಿಸುವ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗೆ ಸೂಚಿಸಿದಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ: ಮಮಇ 405 ಎಸ್‌ಜೆಡಿ 2006, ಬೆಂಗಳೂರು, ದಿನಾಂಕ: 2ನೇ ಜನವರಿ 2007**

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿಯೋಜನೆ ಮೇಲೆ ಇತರೆ ಇಲಾಖೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ, ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಸೂಚಿಸಿರುವ ಉಪನಿರ್ದೇಶಕರು, ಸಹಾಯಕ ನಿರ್ದೇಶಕರು ಮತ್ತು ಪರಿವೀಕ್ಷಣಾಧಿಕಾರಿ ದರ್ಜೆ-1ರ ವೃಂದದ ಅಧಿಕಾರಿಗಳ ಸೇವೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆದು ಮುಂದಿನ ಆದೇಶದವರೆಗೆ ಅವರ ಹೆಸರಿನ ಎದುರಿಗೆ ಸೂಚಿಸಿರುವ ಹುದ್ದೆಗಳಿಗೆ ಸ್ಥಳನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶಿವಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಅನುಬಂಧ**

**(ಸರ್ಕಾರಿ ಆದೇಶ ಸಂಖ್ಯೆ: ಮಮಇ 405 ಎಸ್‌ಜೆಡಿ 2006, 2.1.2006)**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಕಛೇರಿ | ನೇಮಕ ಮಾಡಲಾದ ಸ್ಥಳ ನಿಯುಕ್ತಿಗೊಳಿಸಿದ ಹುದ್ದೆ |
|---|---|---|
| | **ಶ್ರೀಯುತರು:ಶ್ರೀಮತಿ** | |
| 1 | ಹೆಚ್.ಪಿ.ಶಿವಕುಮಾರ್,<br>ಬೋಧಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು | ಉಪನಿರ್ದೇಶಕರು, ಬಳ್ಳಾರಿ |
| 2 | ಭಾಗ್ಯಮಹದೇವಪ್ಪ,<br>ಸಹಾಯಕ ಯೋಜನಾಧಿಕಾರಿ, ಜಿಲ್ಲಾ ಪಂಚಾಯತ್, ಮೈಸೂರು. | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ಕೊಪ್ಪಳ. |
| 3 | ಕೆ.ಪಿ.ಮಂಜುಳಾಕುಮಾರಿ,<br>ಸಹಾಯಕ ಯೋಜನಾಧಿಕಾರಿ, ಜಿಲ್ಲಾ ಪಂಚಾಯತ್, ಬೆಂಗಳೂರು ನಗರ ಜಿಲ್ಲೆ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ರಾಯಚೂರು. |
| 4 | ನರ್ಮದಾ ಆನಂದ್,<br>ಸಹಾಯಕ ಯೋಜನಾಧಿಕಾರಿ, ಜಿಲ್ಲಾ ಪಂಚಾಯತ್, ಶಿವಮೊಗ್ಗ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ಬೆಳಗಾಂ. |
| 5 | ಎಂ.ನಿರ್ಮಲ,<br>ಸಹಾಯಕ ಕಾರ್ಯದರ್ಶಿ (ಅಭಿವೃದ್ಧಿ), ಜಿಲ್ಲಾ ಪಂಚಾಯತ್, ಹಾಸನ. | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ತುಮಕೂರು. |
| 6 | ಆರ್. ಸೋಮಲತ,<br>ಸಹಾಯಕ ಯೋಜನಾಧಿಕಾರಿ (ಅಭಿವೃದ್ಧಿ), ಜಿಲ್ಲಾ ಪಂಚಾಯತ್, ಮಂಡ್ಯ. | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ಕೊಡಗು. |
| 7 | ರಾಜೇಂದ್ರ ಬೇಕಲ್,<br>ಕಾರ್ಯನಿರ್ವಹಣಾಧಿಕಾರಿ, ತಾಲ್ಲೂಕು ಪಂಚಾಯತ್, ಕಾರ್ಕಳ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ಬಿಜಾಪುರ. |
| 8 | ಎಂ.ಸಿ.ಶೈಲಜಾ,<br>ಬೋಧಕರು, ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು. | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ಶಿವಮೊಗ್ಗ. |
| 9 | ಜಿ.ಎಂ.ಸರ್ವೇಶ್ವರ,<br>ಬೋಧಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು. | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ಕಾರವಾರ |

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಕಛೇರಿ | ನೇಮಕ ಮಾಡಲಾದ ಸ್ಥಳ ನಿಯುಕ್ತಿಗೊಳಿಸಿದ ಹುದ್ದೆ |
|---|---|---|
| 10 | ಸಿ.ಎಸ್. ಹೊಳೆಹೊಸೂರು,<br>ಸಹಾಯಕ ಯೋಜನಾಧಿಕಾರಿ, ಜಿಲ್ಲಾ ಪಂಚಾಯತ್, ದಾವಣಗೆರೆ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ಬಳ್ಳಾರಿ. |
| 11 | ಗೋಪಾಲ್,<br>ಕಾರ್ಯನಿರ್ವಾಹಕಾಧಿಕಾರಿ, ತಾಲ್ಲೂಕು ಪಂಚಾಯತ್, ಸೊರಬ. | ನಿರೂಪಣಾಧಿಕಾರಿ, ಉಪನಿರ್ದೇಶಕರ ಕಛೇರಿ, ಬೀದರ್. |
| 12 | ದಿವ್ಯನಾರಾಯಣಪ್ಪ,<br>ಸಹಾಯಕ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಬೆಂಗಳೂರು(ಗ್ರಾ) | ಸಹಾಯಕ ನಿರ್ದೇಶಕರು (ತನಿಖೆ) ಪ್ರಧಾನ ಕಛೇರಿ, ಬೆಂಗಳೂರು. |
| 13 | ಇಬ್ರಾಹಿಂ ಗೂನಡ್ಕ,<br>ಸಹಾಯಕ ಯೋಜನಾಧಿಕಾರಿ, ಕಾರ್ಮಿಕ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ. | ನಿರೂಪಣಾಧಿಕಾರಿ, ಉಪನಿರ್ದೇಶಕರ ಕಛೇರಿ, ರಾಯಚೂರು. |
| 14 | ಮಲ್ಲಿಕಾರ್ಜುನ ಮಾಳಿಗೇರಾ,<br>ಕಾರ್ಯನಿರ್ವಹಕಾಧಿಕಾರಿ, ತಾಲ್ಲೂಕು ಪಂಚಾಯತ್, ಹಿರೇಕೆರೂರ್ | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ಗದಗ್. |
| 15 | ಹೆಚ್.ಆರ್.ಲೀಲಾವತಿ,<br>ಕಿರಿಯ ಪ್ರಬಂಧಕರು, ಮಹಾತ್ಮಗಾಂಧಿ ಗ್ರಾಮೀಣ ಇಂಧನ ಮತ್ತು ಅಭಿವೃದ್ಧಿ ಸಂಸ್ಥೆ, ಜಕ್ಕೂರು, ಬೆಂಗಳೂರು. | ಅಧೀಕ್ಷಕರು, ಶಿಶುಮಂದಿರ, ಬೆಂಗಳೂರು |
| 16 | ಟಿ.ಆರ್.ವೆಂಕಟಲಕ್ಷ್ಮಿ,<br>ಸಹಾಯಕ ಯೋಜನಾಧಿಕಾರಿ, ಎಸ್.ಜಿ.ಎಸ್.ವೈ. ಜಿಲ್ಲಾ ಪಂಚಾಯತ್, ಚಿತ್ರದುರ್ಗ. | ಅಧೀಕ್ಷಕರು, ರಾಜ್ಯ ಮಹಿಳಾ ನಿಲಯ, ದಾವಣಗೆರೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶಿವಕುಮಾರ್**

ಪಿ.ಆರ್. 79 ಸರ್ಕಾರದ ಅಧೀನ ಕಾರ್ಯದರ್ಶಿ,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಒಪ್ಪೋಲೆ

**ಸಂಖ್ಯೆ: ಮಮಇ 405 ಎಸ್‌ಜೆಡಿ 2006, ಬೆಂಗಳೂರು, ದಿನಾಂಕ: 4ನೇ ಜನವರಿ 2007**

ಸರ್ಕಾರಿ ಆದೇಶ ಸಂಖ್ಯೆ: ಮಮಇ 405 ಎಸ್‌ಜೆಡಿ 2006, ದಿನಾಂಕ: 2.1.2007ರ ಅನುಬಂಧದಲ್ಲಿ, ಮುಖ್ಯಶೀರ್ಷಿಕೆ ಅನುಬಂಧದ ಕೆಳಗಿನ ಆವರ್ತದಲ್ಲಿರುವ "ದಿನಾಂಕ: 2.1.2006" ನ್ನು "ದಿನಾಂಕ: 2.1.2007" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶಿವಕುಮಾರ್**

ಪಿ.ಆರ್. 80 ಸರ್ಕಾರದ ಅಧೀನ ಕಾರ್ಯದರ್ಶಿ,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

## ತಿದ್ದುಪಡಿ ಆದೇಶ

**ಸಂಖ್ಯೆ: ಗ್ರಾಅಪ 16 ಎಸ್‌ಜಿಆರ್ 2006, ಬೆಂಗಳೂರು, ದಿನಾಂಕ: 28ನೇ ಡಿಸೆಂಬರ್ 2006**

**ವಿಷಯ:** ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆಯಡಿ ಹೆಚ್ಚುವರಿಯಾಗಿ ಬಿಡುಗಡೆ ಮಾಡಲಾದ ಅನುದಾನಕ್ಕೆ ರಾಜ್ಯದ ಪಾಲಿನ ಅನುದಾನವನ್ನು ಐದು ಜಿಲ್ಲಾ ಪಂಚಾಯತಿಗಳಿಗೆ ಶೇಕಡಾ 20ರ ಭಾಗಾಂಶವನ್ನು ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 16 ಎಸ್‌ಜಿಆರ್‌ವೈ 2006, ದಿನಾಂಕ: 6.11.06.

ಮೇಲಿನ ವಿಷಯಕ್ಕೆ ಸಂಬಂಧಿಸಿದ ಉಲ್ಲೇಖಿತ ಸರ್ಕಾರದ ಆದೇಶದಲ್ಲಿ ಲಗತ್ತಿಸಲಾದ ಅನುಬಂಧದಲ್ಲಿ (Annexure) ನಮೂದಿಸಲಾದ ಲೆಕ್ಕಶೀರ್ಷಿಕೆ (2505-60-196-6-94) ಅನ್ನು (2505-60-196-6-04) ಎಂಬುದಾಗಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶಾಂತರಾಜ್**

ಪಿ.ಆರ್. 82 ನಿರ್ದೇಶಕರು,

ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ

ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,

ಗ್ರಾಮೀಣಾಬಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಕಂದಾಯ ಸಚಿವಾಲಯ

**ವಿಷಯ:** ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ), ಗುಲ್ಬರ್ಗಾ ಈ ಸಂಸ್ಥೆಗೆ ನೇಮಕ ಮಾಡಲಾಗಿರುವ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಿ ಆದೇಶಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಕಂಇ 31 ಮುನೊಸೊ 2001, ದಿನಾಂಕ: 27.02.2004.

2) ಆಡಳಿತಾಧಿಕಾರಿಗಳು, ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ), ಗುಲ್ಬರ್ಗಾ ಇವರ ಪತ್ರ ಸಂಖ್ಯೆ: ಜಿಪಗು/ಆಡಳಿತ/83, 2005-06/1205, ದಿನಾಂಕ: 18.8.2006.

**ಪ್ರಸ್ತಾವನೆ:**

ಮೇಲೆ-1 ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ), ಗುಲ್ಬರ್ಗಾ ಈ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಲು ಹಾಗೂ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತಿ ಆಡಳಿತ ಮಂಡಳಿಗೆ ಅಧಿಕಾರ ವಹಿಸಲು ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಗಿತ್ತು. ಆಡಳಿತಾಧಿಕಾರಿ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದೆ. ಮೇಲೆ ಓದಲಾದ (2) ರಲ್ಲಿ ಆಡಳಿತಾಧಿಕಾರಿಗಳು ಪ್ರಸ್ತಾವನೆ ಸಲ್ಲಿಸಿ ಆಡಳಿತಾಧಿಕಾರಿ ಅವಧಿ ದಿನಾಂಕ: 26.8.2006 ರಂದು ಮುಕ್ತಾಯಗೊಂಡಿದ್ದು ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಲು ಹೆಚ್ಚಿನ ಕಾಲಾವಕಾಶವನ್ನು ಕೋರಿದ್ದಾರೆ. ಆಡಳಿತಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 27.8.2006 ರಿಂದ 6 ತಿಂಗಳ ಅವಧಿಗೆ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ.

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 30 ಮುನೊಸೊ 2006, ಬೆಂಗಳೂರು, ದಿನಾಂಕ: 5ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಶ್ರೀ ಫೈಯಜುಲ್ ಉಲುಮ್ ಎಜುಕೇಷನ್ ಸೊಸೈಟಿ, ರೋಜಾ (ಕೆ), ಗುಲ್ಬರ್ಗಾ ಈ ಸಂಸ್ಥೆಗೆ ಆಡಳಿತಾಧಿಕಾರಿಯಾಗಿ ನೇಮಕವಾಗಿರುವ ಉಪ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಗುಲ್ಬರ್ಗಾ (ಆಡಳಿತ) ಆಡಳಿತಾಧಿಕಾರಿಯ ಅವಧಿಯನ್ನು ದಿನಾಂಕ: 27.8.2006 ರಿಂದ ಮುಂದಿನ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ನೂತನ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರಿಯನ್ನು ಹಸ್ತಾಂತರಿಸುವವರೆಗೆ ಅಥವಾ ಇವರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ. ಆಡಳಿತಾಧಿಕಾರಿಯವರು ವಿಸ್ತರಣಾ ಅವಧಿಯೊಳಗೆ ಕಡ್ಡಾಯವಾಗಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಲಿಂಗ**

ಪಿ.ಆರ್. 105

ಪೀಠಾಧಿಕಾರಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ರಾಜ್ಯದಲ್ಲಿನ ಪಾರಂಪಾರಿಕ ದೇವಸ್ಥಾನಗಳ ಜೀರ್ಣೋದ್ಧಾರ/ಸಂರಕ್ಷಣೆ ಮಾಡಲು ಕರ್ನಾಟಕ ಸಂಸ್ಕೃತಿ ಸಂರಕ್ಷಣಾ ಸೊಸೈಟಿ ಸ್ಥಾಪನೆ ಬಗ್ಗೆ.

**ಪ್ರಸ್ತಾವನೆ:**

ಮಾನ್ಯ ಹಣಕಾಸು ಸಚಿವರು 2006-07ನೇ ಸಾಲಿನ ಆಯವ್ಯಯ ಭಾಷಣದಲ್ಲಿ ರಾಜ್ಯದಲ್ಲಿ ನಾಡಿನ ಸಂಸ್ಕೃತಿಯ ಸಂಕೇತಗಳಾಗಿರುವ ನೂರಾರು ಐತಿಹಾಸಿಕ ದೇವಾಲಯಗಳಿದ್ದು, ಅವುಗಳ ಪುನರುಜ್ಜೀವನ ಮತ್ತು ಸಂರಕ್ಷಣೆ ಹಾಗೂ ಅವುಗಳನ್ನು ಪ್ರವಾಸೋದ್ಯಮ ಅಭಿವೃದ್ಧಿಗೆ ಸಾಧನವಾಗಿ ಬಳಸಿಕೊಳ್ಳಲು ಸರ್ಕಾರ ನಿರ್ಧರಿಸಿದೆಯೆಂದು ತಿಳಿಸಿ, ಈ ಕಾರ್ಯಕ್ಕಾಗಿ ತಜ್ಞರನ್ನು ಒಳಗೊಂಡ "ಕರ್ನಾಟಕ ಸಂಸ್ಕೃತಿ ಸಂರಕ್ಷಣಾ ಪ್ರಾಧಿಕಾರ" ವನ್ನು ರಚಿಸಲಾಗುವುದೆಂದು ಹಾಗೂ ಇದಕ್ಕೆ ಕೇಂದ್ರ ಸರ್ಕಾರ ಮತ್ತು ಯುನೆಸ್ಕೋನಂತಹ ಅಂತರರಾಷ್ಟ್ರೀಯ ಸಂಸ್ಥೆಗಳಿಂದ ಆರ್ಥಿಕ ಸಹಾಯಕ ಪಡೆದು ದೇವಾಲಯಗಳ ಸಂರಕ್ಷಣೆಗೆ ಬಳಸಿಕೊಳ್ಳಲಾಗುವುದೆಂದು ತಿಳಿಸಿರುತ್ತಾರೆ.

"ಕರ್ನಾಟಕ ಸಂಸ್ಕೃತಿ ಸಂರಕ್ಷಣಾ ಪ್ರಾಧಿಕಾರ" ವನ್ನು ಸ್ಥಾಪಿಸಲು 2006-07ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "2250-00-103-4-00 (ಯೋಜನೆ) ಪರಂಪರೆಯ ದೇವಸ್ಥಾನಗಳಿಗಾಗಿ ಪ್ರಾಧಿಕಾರ" ಇದರಡಿಯಲ್ಲಿ ರೂ.200-00 ಲಕ್ಷಗಳ ಅನುದಾನಗಳನ್ನು ಒದಗಿಸಲಾಗಿದೆ.

ಈ ಹಿನ್ನೆಲೆಯಲ್ಲಿ ರಾಜ್ಯದಲ್ಲಿನ ಪಾರಂಪಾರಿಕ ದೇವಸ್ಥಾನಗಳ ಜೀರ್ಣೋದ್ಧಾರ/ಸಂರಕ್ಷಣೆ ಮಾಡಲು ಕರ್ನಾಟಕ ಸಂಸ್ಕೃತಿ ಸಂರಕ್ಷಣಾ ಸೊಸೈಟಿ ಸ್ಥಾಪನೆ ಮಾಡಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 49 ಮುಅಕಾ 2004, ಬೆಂಗಳೂರು, ದಿನಾಂಕ: 8ನೇ ಜನವರಿ 2007**

ಸರ್ಕಾರವು ರಾಜ್ಯದಲ್ಲಿನ ಧಾರ್ಮಿಕ ದತ್ತಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಹಾಗೂ 50 ವರ್ಷಗಳ ಮೇಲ್ಪಟ್ಟು ಹಳೆಯದಾದ ಪಾರಂಪಾರಿಕ ದೇವಾಲಯಗಳ ಸಂರಕ್ಷಣೆಗಾಗಿ ಕರ್ನಾಟಕ ಸಂಸ್ಕೃತಿ ಸಂರಕ್ಷಣಾ ಸೊಸೈಟಿಯನ್ನು ರಚಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಈ ಸೊಸೈಟಿಯು ಪ್ರಮುಖವಾಗಿ ಕೆಳಕಂಡ ಕಾರ್ಯಚಟುವಟಿಕೆಗಳನ್ನು ನಿರ್ವಹಿಸತಕ್ಕದ್ದು:-

(1) ಧಾರ್ಮಿಕ ದತ್ತಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಪಾರಂಪಾರಿಕ ದೇವಸ್ಥಾನಗಳ ಸರ್ವೆಕಾರ್ಯವನ್ನು ಕೈಗೊಳ್ಳುವುದು.

(2) ಪಾರಂಪಾರಿಕ ಸ್ಥಳಗಳ ನಕ್ಷೆ ತಯಾರಿಸಿ ಅಭಿವೃದ್ಧಿ ಪಡಿಸುವುದು.

(3) ಧಾರ್ಮಿಕ ದತ್ತಿ ಇಲಾಖೆಯ ಅಧೀನದಲ್ಲಿರುವ ಆಸ್ತಿಗಳನ್ನು ಸಾರ್ವಜನಿಕ–ಖಾಸಗಿ ಪಾಲುಗಾರಿಕೆ ಮಾದರಿಯ ಸಹಭಾಗಿತ್ವದೊಂದಿಗೆ (public-private partnership model) ಅಭಿವೃದ್ಧಿ ಪಡಿಸಲು ಕ್ರಮ ಕೈಗೊಳ್ಳುವುದು.

(4) ಸಂಪನ್ಮೂಲಗಳನ್ನು ಹೆಚ್ಚಿಸುವ ಮಾದರಿಯ ಬಗ್ಗೆ ಸಲಹೆಗಳನ್ನು ನೀಡುವುದು.

(5) ಸ್ವಸಾಮರ್ಥ್ಯವುಳ್ಳ ಹಾಗೂ ಸ್ವಾಯತ್ತ ಗುಣಗಳನ್ನು ಹೊಂದಿರುವ ಪಾರಂಪಾರಿಕ ಸ್ಥಳಗಳನ್ನು ಗುರುತಿಸಿ ಅವುಗಳನ್ನು ವರ್ಗೀಕರಿಸುವುದು.

(6) ಪಾರಂಪಾರಿಕ ದೇವಾಲಯಗಳು/ಸಂಸ್ಥೆಗಳನ್ನು ಅಭಿವೃದ್ಧಿಪಡಿಸಿ ನಿರ್ವಹಿಸುವುದು.

ಈ ಸಂಬಂಧದ ವೆಚ್ಚವನ್ನು 2006–07ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ "2250–00–103–4–00 (ಯೋಜನೆ) ರಡಿ ಒದಗಿಸಿರುವ ರೂ.200–00 ಲಕ್ಷಗಳ ಅನುದಾನದಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್. 106

## ಸಾರ್ವಜನಿಕ ಉದ್ದಿಮೆಗಳ ಸಚಿವಾಲಯ

**ವಿಷಯ:** ಕರ್ನಾಟಕ ಕೃಷಿ ಕೈಗಾರಿಕಾ ನಿಗಮದ ನೌಕರರ ವೇತನ ಬಾಕಿಗಾಗಿ ಮತ್ತು ನಿವೃತ್ತಿ ಹೊಂದಿದ ನೌಕರರಿಗೆ ಟರ್ಮಿನಲ್ ಪರಿಹಾರಕ್ಕಾಗಿ ಹಣ ಬಿಡುಗಡೆ ಮಾಡುವ ಹಾಗೂ 1999–2000ದ ಸ್ವಯಂ ನಿವೃತ್ತಿ ಯೋಜನೆಯಡಿ ಮಾಸಿಕ ಶೇ.80 ದರದ ವೇತನ ಬಾಕಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶದ ಸಂಖ್ಯೆ: ಡಿಡಿಪಿಇಆರ್ 99 ಎಆರ್‌ಯು 2003, ದಿನಾಂಕ: 23.12.2004.

2) ಸರ್ಕಾರದ ಆದೇಶದ ಸಂಖ್ಯೆ: ಡಿಡಿಪಿಇಆರ್ 99 ಎಆರ್‌ಯು 2003, ದಿನಾಂಕ: 17.02.2005.

3) ರಾಜ್ಯ ಲೆಕ್ಕಪತ್ರ ಇಲಾಖೆ ಪತ್ರದ ರಾಲೇಪ 21 ಲೆತಾ4/ಕೆಎಐಸಿ–2003–04, ದಿನಾಂಕ: 23.8.2004.

4) ವ್ಯವಸ್ಥಾಪಕ ನಿರ್ದೇಶಕರು, ಕೆಎಐಸಿ ಇವರ ಪತ್ರದ ಸಂಖ್ಯೆ: ಎಂಡಿ/ಕೆಎಐಸಿ/ಡಿಪಿಇ/2006/98, ದಿನಾಂಕ: 27.05.2006.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರ ಸರ್ಕಾರಿ ಆದೇಶದಲ್ಲಿ ಕೆಎಐಸಿಗೆ ನೌಕರರ ವೇತನ ಬಾಕಿ ಮತ್ತು ನಿವೃತ್ತಿ ಹೊಂದಿದ ನೌಕರರಿಗೆ ಟರ್ಮಿನಲ್ ಪರಿಹಾರಕ್ಕಾಗಿ ಈಗಾಗಲೇ ರೂ.2,90,00,000/– ಹಾಗೂ 2,50,00,000 ಹಣವನ್ನು ಬಿಡುಗಡೆ ಮಾಡಿ ಆದೇಶ ಹೊರಡಿಸಲಾಗಿದೆ. ಕೆಎಐಸಿಯ ನೌಕರರ ವೇತನ ಬಾಕಿಗಾಗಿ ಮತ್ತು ನಿವೃತ್ತಿ ಹೊಂದುವ ನೌಕರರಿಗೆ ಟರ್ಮಿನಲ್ ಪರಿಹಾರಕ್ಕಾಗಿ ಒಟ್ಟು ರೂ.5,91,66,639/– ಹಾಗೂ 1999–2000ರ ಸ್ವಯಂ ನಿವೃತ್ತಿ ಯೋಜನೆಯಡಿ ಮಾಸಿಕ ಶೇ.80% ದರದ ವೇತನ ಬಾಕಿ ರೂ.2,15,696/– ಎಂದು ರಾಜ್ಯ ಲೆಕ್ಕ ಪತ್ರ ಮೇಲೆ ಓದಲಾದ (3) ರಲ್ಲಿ ನಮೂದಿಸಿರುವ ಪತ್ರದಲ್ಲಿ ಘಟನಾ ಪೂರ್ವ ಲೆಕ್ಕ ತನಿಖೆಯ ವರದಿ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (4)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು ಕೆಎಐಸಿ ಇವರು ಸ್ವಯಂ ನಿವೃತ್ತಿ ಹೊಂದಿದ ನೌಕರರಿಗೆ ನಿವೃತ್ತಿ ಸೌಲಭ್ಯಗಳನ್ನು ಪಾವತಿಸಲು ಒಟ್ಟು ರೂ.53,82,333/– ಹಣವನ್ನು ಬಿಡುಗಡೆ ಮಾಡುವಂತೆ ಕೋರಿದ್ದು ಅದರಲ್ಲಿ ಈಗಾಗಲೇ ಬಿಡುಗಡೆಯಾಗಿರುವ ರೂ.41,229/– ಹಣ ನಿಗಮದಲ್ಲಿ ಲಭ್ಯವಿದ್ದು ಅದನ್ನು ಕಳೆದು ಒಟ್ಟು ರೂ.53,41,106/– ಬಿಡುಗಡೆಗೆ ಕೋರಿರುತ್ತಾರೆ. ಆರ್ಥಿಕ ಇಲಾಖೆಯು ಡಿಪಿಇ/99/ಎಆರ್‌ಯು/2003ರ ಕಡತದಲ್ಲಿ ಉಲ್ಲೇಖ ಸಂಖ್ಯೆ: ಎಫ್.ಡಿ.1166–ಇಎಕ್ಸ್‌ಪಿ–1–06 ದಿನಾಂಕ: 03.01.2007 ರಲ್ಲಿ ರೂ.53,41,106/– ಬಿಡುಗಡೆ ಮಾಡಲು ಒಪ್ಪಿಗೆ ನೀಡಿದೆ. ಆದುದರಿಂದ ಈ ಕೆಳಗಿನಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಡಿಪಿಇ 99 ಎಆರ್‌ಯು 2003, ಬೆಂಗಳೂರು, ದಿನಾಂಕ: 9ನೇ ಜನವರಿ 2007**

ಮೇಲ್ಕಂಡ ಪ್ರಸ್ತಾವನೆ ಅನ್ವಯ ಕೆಎಐಸಿ ನಿಯಮಿತ, ಬೆಂಗಳೂರು ಸಂಸ್ಥೆಯ ವೇತನ ಬಾಕಿಗಾಗಿ ಮತ್ತು ನಿವೃತ್ತಿ ಹೊಂದಿದ ನೌಕರರಿಗೆ ಪರಿಹಾರಕ್ಕಾಗಿ ಹಾಗೂ 1999–2000ರ ಸ್ವಯಂ ನಿವೃತ್ತಿ ಯೋಜನೆಯಡಿಯಲ್ಲಿ ಮಾಸಿಕ ಶೇ.80 ದರದ ವೇತನ ಬಾಕಿ ಪರಿಹಾರಕ್ಕಾಗಿ ರೂ.53,41,106/– (ರೂಪಾಯಿ ಐವತ್ತಮೂರು ಲಕ್ಷದ ನಲವತ್ತೊಂದು ಸಾವಿರದ ಒಂದನೂರ ಆರು ಮಾತ್ರ) ವನ್ನು ಸಾಲದ ರೂಪದಲ್ಲಿ ಈ ಕೆಳಕಂಡ ಷರತ್ತುಗಳನ್ವಯ ಬಿಡುಗಡೆ ಮಾಡಲು ಆದೇಶಿಸಿದೆ.

(1) ಬಿಡುಗಡೆ ಮಾಡಿದ ರೂ.53,41,106/– ಗಳನ್ನು ಕಟ್ಟುನಿಟ್ಟಾಗಿ ವೇತನ ಬಾಕಿಗಾಗಿ ಮತ್ತು ನಿವೃತ್ತಿ ಹೊಂದಿದ ನೌಕರರಿಗೆ ಟರ್ಮಿನಲ್ ಪರಿಹಾರವಾಗಿ ಹಾಗೂ 1999–2000ರ ಸ್ವಯಂ ನಿವೃತ್ತಿ ಯೋಜನೆಯಡಿ ಮಾಸಿಕ ಶೇ.80 ದರದ ವೇತನ ಬಾಕಿ ಪರಿಹಾರಕ್ಕಾಗಿ ಮಾತ್ರ ಉಪಯೋಗಿಸತಕ್ಕದ್ದು ಹಾಗೂ ಈ ಹಣವನ್ನು ಬೇರೆ ಉದ್ದೇಶಕ್ಕೂ ಉಪಯೋಗಿಸಬಾರದು.

(2) ಮಂಜೂರಾಗಿರುವ ಮೊತ್ತವನ್ನು ಲೆಕ್ಕ ಪತ್ರ ಇಲಾಖೆಯು ಪೂರ್ವ ತನಿಖಾ ವಿವರ ಅನುಬಂಧದಂತೆ ವಿತರಣೆ ಮಾಡತಕ್ಕದ್ದು.

(3) ಸದರೀ ಹಣ ಪ್ರತ್ಯೇಕ ಬ್ಯಾಂಕ್ ಖಾತೆಯಲ್ಲಿ ಜಮಾ ಮಾಡಿ ಖಾತೆಯ ಚೆಕ್ಕುಗಳ ಮುಖಾಂತರ ನೌಕರರಿಗೆ ವಿತರಿಸುವುದು.

ಈ ಹಣವನ್ನು ಉಪಕಾರ್ಯದರ್ಶಿ, ಸಾರ್ವಜನಿಕ ಉದ್ದಿಮೆ ಇಲಾಖೆ, ಬೆಂಗಳೂರು ಇವರ ಮೇಲು ರುಜು ಪಡೆದು ರಾಜ್ಯ ಹೂಜೂರ್ ಖಜಾನೆಯಿಂದ ಡ್ರಾ ಮಾಡುವುದು. ಈ ಮೊತ್ತವನ್ನು 2006–07ನೇ ಸಾಲಿನ ಲೆಕ್ಕ ಶೀರ್ಷಿಕೆ 6852–02–119–4–02 (ಎನ್‌ಪಿ) 394 ಲೋನ್ಸ್ ಸ್ಟೇಟ್ ರಿನಿವಲ್ ಫಂಡ್ ದಿಂದ ಬಿಡುಗಡೆ ಮಾಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ–1166–ಇಎಕ್ಸ್‌ಪಿ–1/2006, ದಿನಾಂಕ: 03.01.2007ರ ಸಹಮತಿ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ನಾರಾಯಣ ಕೆ. ನಾಯಕ**

ಪಿ.ಆರ್. 107

ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ)

ಸಾರ್ವಜನಿಕ ಉದ್ದಿಮೆಗಳ ಇಲಾಖೆ.

## FOREST ENVIRONMENT & ECOLOGY SECRETARIAT

**Subject:** Inclusion of Dandeli Wildlife Sanctuary and Anshi National Park as one of the Tiger Reserves, Issue of order-reg.

**Ref:** 1) Letter No. B/WL/CR-53/2004-05, dated: 17.12.2004 of the Principal Chief Conservator of Forests (Wildlife), Bangalore.

2) Letter No.3-1/2003-PT dated: 5th August 2006 from the IGF & Director, Project Tiger Ministry of Environment & Forests, Government of India, New Delhi.

3) Letter No. DMN/WL/CR-14/2006-07, dated: 22.8.2006 of the Principal Chief Conservator of Forests (Wildlife), Bangalore.

**PREAMBLE:**

Principal Chief Conservator of Forests (Wildlife), Bangalore vide his letter cited at (1) above had sent proposals for inclusion of Dandeli Wildlife Sanctuary and Anshi National Park as third Tiger Reserve in Karnataka.

Government of India vide letter cited at (2) above conveyed "in principle" approval of the competent authority for inclusion of Dandeli Wildlife Sanctuary and Anshi National Park under Project Tiger which covers an area of 475.018 Sq kms in Dandeli Wildlife Sanctuary and 339.886 sq kms in Anshi National Park.

The Principal Chief Conservator of Forests (Wildlife), Bangalore in his letter dated: 22.08.2006 has requested to issue necessary notification by the Government of Karnataka as desired by Government of India.

The Government of Karnataka has examined all the aspects.

**GOVERNMENT ORDER No. FEE 254 FWL 2006, Bangalore, Dated: 4th January 2007**

In the circumstances stated above the Government of Karnataka is pleased to accept the approval of the Government of India for incorporating "Dandeli Wildlife Sanctuary and Anshi National Park" as a Tiger Reserve under the Centrally Sponsored scheme "Project Tiger" subject to the conditions specified by Government of India and notify Dandeli Wildlife Sanctuary and Anshi National Park as "Dandeli-Anshi Tiger Reserve" under section 38 V(1) of the Wildlife Protection Act 1972

By Order and in the name of the Governor of Karnataka,

**H.M. MALLIKARJUNA SWAMY**

P.R. 85

Under Secretary to Government,

Forest, Environment & Ecology Department.

## COMMERCE & INDUSTRIES SECRETARIAT

**Subject:** Inclusion of additional members to the State Level Task Force Committee.

**Read:** 1) Government Order No. CI.194:MMM.2005, dated: 16.11.2005.

2) Letter No. DMG/AD(M).Task Force/2006-07, dated: 19:22.06.2006.

**PREAMBLE:**

In Government Order read at (1) above, a State Level Task Force Committee and District Level Task Force Committee have been constituted for monitoring and checking mining matters including illegal mining. The Commissioner for Mines and Geology, Bangalore in his letter read at (2) above has requested the Government to include the following Officers in the State Level Task Force Committee as per the decision taken in the State Level Task Force Committee meeting held on 28.08.2006:-

1. The Senior Divisional Commercial Manager, South Western Railways, Hubli;
2. The Secretary to Government, Forest, Environment & Ecology Department;

3. The Commissioner, Survey, Settlement & Land Records, K.R.Circle, Bangalore.

The proposal has been examined.

**GOVERNMENT ORDER No. CI 191 MMM 2006, Bangalore, Dated: 5th January 2007**

In the circumstances explained in the preamble, approval of Government is accorded for inclusion of the following additional members to the State Level Task Force Committee constituted vide Government Order read at (1) above:-

1. The Senior Divisional Commercial Manager, South Western Railways, Hubli;
2. The Secretary to Government, Forest, Environment & Ecology Department;
3. The Commissioner, Survey, Settlement & Land Records, K.R.Circle, Bangalore.

By Order and in the name of the Governor of Karnataka,

**K. JAYACHANDRA**

P.R. 86

Under Secretary to Government (Mines),
Commerce & Industries Department.

**LAW, JUSTICE & HUMAN RIGHTS SECRETARIAT**

**Subject:** Appointment of Sri S. Shankarappa as Special Public Prosecutor to City Civil and Sessions Court, Bangalore.

**Read:** 1) Notification No. LAW 67 LCE 2006, dated: 22.06.2006.
2) Notification No. LAW 144 LCE 2006, dated: 13.12.2006.

**PREAMBLE:**

In notification read at (1) above, Special Courts were constituted, in exercise of powers conferred under Section 10(1) of Karnataka Protection of Interest of Depositors in Financial Establishments Act (2004). Further in notification read at (2) above, Sri S. Shankarappa, was appointed as Special Public Prosecutor for the purpose of conducting cases before the Special Court constituted for Bangalore metropolitan area.

After examining the issue relating to terms and conditions of his appointment, following orders are issued.

**GOVERNMENT ORDER No. LAW 144 LCE 2006, Bangalore, Dated: 30th December 2006**

Sanction is accorded to pay the following fees to Sri S. Shankarappa:-

| Sl.No. | Item | Rs. |
|---|---|---|
| 1 | Reading fee (about 50 volumes) | 1,00,000.00 (one lakh) |
| 2 | Junior's fee | 20,000.00 (twenty thousand) |
| 3 | Effective appearance | 5,000.00 (five thousand) |
| 4 | Non-effective appearance | 500.00 (five hundred) |
| 5 | Junior's effective appearance | 1,000.00 (one thousand) |
| 6 | Misc. expenses | 25,000.00 (twenty five thousand) |

The expenditure shall be debited to the Head of Account 2014-00-114-0-01 (015-subsidiary expenses).

The Administrative Officer, O/o the Advocate General is authorised to draw the amounts and disburse the same to Sri S. Shankarappa.

This issues with the concurrence of Finance Department vide u.o. note No. FD 1081 Exp-7 06 dated: 05.12.2006.

By Order and in the name of the Governor of Karnataka,

**E. SHIVANANDA**

P.R. 88

Under Secretary to Government (Admn-1),
Law, Justice & Human Rights Department.

**ಶಿಕ್ಷಣ ಸಚಿವಾಲಯ**

**ವಿಷಯ:–** ವೃತ್ತಿ ಶಿಕ್ಷಣ ಇಲಾಖೆಯಿಂದ ಜಂಟಿ ನಿರ್ದೇಶಕರ ಹುದ್ದೆಯನ್ನು ಪದವಿ ಪೂರ್ವ ಶಿಕ್ಷಣ ಇಲಾಖೆಗೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:–** 1. ಸರ್ಕಾರದ ಆದೇಶ ಸಂಖ್ಯೆ:ಇಡಿ 355 ಡಿಪಿಐ 96, ದಿನಾಂಕ:25/01/1997.

2. ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ:ಪಪೂಶಿಇ/ಸಿಬ್ಬಂದಿ/ಜಂಟಿ.ನಿಬಡ್ತಿ/76/ 2006–07, ದಿನಾಂಕ:21/08/2006
3. ನಿರ್ದೇಶಕರು, ವೃತ್ತಿ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ:ಅವಿ/1/ಡಿವಿಇ–84/ಸಿಬ್ಬಂದಿ/96, ದಿನಾಂಕ:14/08/2006.
4. ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 376 ಡಿಪಿಐ 2006, ದಿನಾಂಕ:16/09/2006.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರದ ಆದೇಶದಲ್ಲಿ ಪದವಿ ಪೂರ್ವ ಶಿಕ್ಷಣ ಇಲಾಖೆಯ ಅರ್ಹ ಉಪ ನಿರ್ದೇಶಕರ ಹುದ್ದೆಗಳಿಗೆ ಜಂಟಿ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ವೃತ್ತಿ ಶಿಕ್ಷಣ ಇಲಾಖೆಯಲ್ಲಿರುವ ಜಂಟಿ ನಿರ್ದೇಶಕರ ಹುದ್ದೆಗಳಲ್ಲಿ ನಿಯೋಜನೆಯ ಮೇಲೆ ಕಾರ್ಯ ನಿರ್ವಹಿಸಲು ಆದೇಶಿಸಿದೆ.

2. ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು, ಇವರು ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರ ವೃಂದದವರಿಗೆ ರೂ.10,620–14,960 ರ ವೇತನ ಶ್ರೇಣಿಯ ಸಹ ನಿರ್ದೇಶಕರ ವೃಂದದ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಲು ತೀರ್ಮಾನಿಸಿದ್ದು, ವೃತ್ತಿ ಶಿಕ್ಷಣ ಇಲಾಖೆಯಿಂದ ಒಂದು ಜಂಟಿ ನಿರ್ದೇಶಕರ ಹುದ್ದೆಯನ್ನು ಸ್ಥಳಾಂತರಿಸಿ ಸದರಿ ಹುದ್ದೆಗೆ ಶ್ರೀ.ಡಿ.ಸಿದ್ದರಾಜು ಇವರನ್ನು ಸ್ಥಳನಿಯುಕ್ತಿಗೊಳಿಸುವಂತೆ ಕೋರಿರುತ್ತಾರೆ.

3. ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ನಿರ್ದೇಶಕರು, ವೃತ್ತಿ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು, ಇವರು ನಿರ್ದೇಶನಾಲಯದ ಎಸ್.ಐ.ವಿ.ಇ ವಿಭಾಗದಲ್ಲಿ ಸಹ ನಿರ್ದೇಶಕರು / ಪ್ರೋಫೆಸರ್ –1 ಹುದ್ದೆ, ಉಪ ನಿರ್ದೇಶಕರು / ರೀಡರ್– 2 ಹುದ್ದೆ, ಸಹಾಯಕ ನಿರ್ದೇಶಕರು / ಪ್ರಾಂಶುಪಾಲರು – 5 ಹುದ್ದೆಗಳಿರುತ್ತವೆಂದು, ಇವುಗಳ ಮುಖ್ಯ ಉದ್ದೇಶ ವೃತ್ತಿ ಶಿಕ್ಷಣದ ಶೈಕ್ಷಣಿಕ ಉನ್ನತ್ತೀಕರಣವಾಗಿದೆಯೆಂದು, ಸದರಿ ಹುದ್ದೆಗಳನ್ನು ಪದವಿ ಪೂರ್ವ ಶಿಕ್ಷಣ ಇಲಾಖೆಯ ಪ್ರಾಂಶುಪಾಲರು / ಉಪ ನಿರ್ದೇಶಕರು ಹಾಗೂ ಸಹ ನಿರ್ದೇಶಕರುಗಳಿಂದ ಭರ್ತಿ ಮಾಡಲಾಗುತ್ತಿದ್ದು, ಶೈಕ್ಷಣಿಕ ಉನ್ನತ್ತೀಕರಣದ ದೃಷ್ಠಿಯಿಂದ ಜೀವಶಾಸ್ತ್ರ, ಭೌತಶಾಸ್ತ್ರ, ರಸಾಯನಶಾಸ್ತ್ರ, ವಾಣಿಜ್ಯಶಾಸ್ತ್ರ, ಕನ್ನಡ, ಆಂಗ್ಲಭಾಷಾ, ಎಲೆಕ್ಟ್ರಾನಿಕ್ ಮತ್ತು ಕಂಪ್ಯೂಟರ್ ವಿಷಯಗಳಲ್ಲಿ ಸ್ನಾತಕೋತ್ತರ ಪದವಿ ಪಡೆದವರನ್ನು ನಿಯೋಜಿಸಿ ತುಂಬುವಂತೆ ಹಾಗೂ ಸಹ ನಿರ್ದೇಶಕರ ಹುದ್ದೆಗೆ ಬದಲಾಗಿ ಕಂಪ್ಯೂಟರ್ ಶಿಕ್ಷಣದ ಒಂದು ಉಪನ್ಯಾಸಕರ ಹುದ್ದೆಯನ್ನು ಇಲಾಖೆಗೆ ನೀಡಬೇಕೆಂಬ ಷರತ್ತಿಗೊಳಪಟ್ಟು ಒಂದು ಸಹ ನಿರ್ದೇಶಕರ ಹುದ್ದೆಯನ್ನು ಪದವಿ ಪೂರ್ವ ಶಿಕ್ಷಣ ಇಲಾಖೆಗೆ ಸ್ಥಳಾಂತರಿಸಲು ಒಪ್ಪಿಗೆ ನೀಡಿರುತ್ತಾರೆ.

4. ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಸರ್ಕಾರದ ಅಧಿಸೂಚನೆ ದಿನಾಂಕ :16/09/2006 ರಲ್ಲಿ ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರ ವೃಂದದಿಂದ ಸಹ ನಿರ್ದೇಶಕರ ವೃಂದಕ್ಕೆ ಬಡ್ತಿ ನೀಡಿ, ಶ್ರೀ.ಡಿ.ಸಿದ್ದರಾಜು, ಇವರನ್ನು ಸಹ ನಿರ್ದೇಶಕರು (ಎಸ್.ಐ.ವಿ.ಇ) ವೃತ್ತಿ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು, ಇಲ್ಲಿಗೆ ನೇಮಿಸಲಾಗಿದೆ.

ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 105 ಡಿಪಿಐ 2006, ದಿನಾಂಕ: 27ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ ವೃತ್ತಿ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು, ಇಲ್ಲಿನ ಎಸ್.ಐ.ವಿ.ಇ ವಿಭಾಗದಲ್ಲಿನ ಸಹ ನಿರ್ದೇಶಕರ ಹುದ್ದೆಯನ್ನು ಸದರಿ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ.ಡಿ.ಸಿದ್ದರಾಜು, ಇವರ ಸಮೇತ ಪದವಿ ಪೂರ್ವ ಶಿಕ್ಷಣ ಇಲಾಖೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸ್ಥಳಾಂತರಿಸಿ ಆದೇಶಿಸಿದೆ.

ಈ ಸ್ಥಳಾಂತರವು ಪದವಿ ಪೂರ್ವ ಶಿಕ್ಷಣ ಇಲಾಖೆಯಿಂದ ಒಂದು ಕಂಪ್ಯೂಟರ್ ವಿಷಯದ ಉಪನ್ಯಾಸಕರ ಹುದ್ದೆಯನ್ನು ಸದರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವವರ ಸಮೇತ ವೃತ್ತಿ ಶಿಕ್ಷಣ ನಿರ್ದೇಶನಾಲಯಕ್ಕೆ ಸ್ಥಳಾಂತರಿಸುವ ಷರತ್ತಿಗೊಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸ್ವರ್ಣಲತಾ.ಎಂ.ಭಂಡಾರೆ**

ಪಿ.ಆರ್. 33

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು–1,2)

**ವಿಷಯ:** ಕರ್ನಾಟಕದಲ್ಲಿನ ರಾಜ್ಯ ಪಠ್ಯಕ್ರಮ ಅನುಸರಿಸುವ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿದ್ದು, ಕನ್ನಡ ಭಾಷಾ ವಿಷಯದ ಬದಲು ಆಲ್ಟರ್‌ನೇಟಿವ್ ಇಂಗ್ಲೀಷ್ ವಿಷಯವನ್ನು ಕಲಿಯಲು ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧಿಕಾರಿಗಳಿಂದ ಈಗಾಗಲೇ ಅನುಮತಿಯನ್ನು ಪಡೆದವರನ್ನು, ಒಂದು ಬಾರಿಯ ಕ್ರಮವನ್ನಾಗಿ ಅದನ್ನೇ ಮುಂದುವರೆಸಲು ಅನುಮತಿಯನ್ನು ನೀಡುವ ಬಗ್ಗೆ.

**ಉಲ್ಲೇಖ:** (1) ದಿ. 19.6.1989ರ ಸರ್ಕಾರದ ಆದೇಶ ಸಂಖ್ಯೆ ಇಡಿ 87 ಪ್ರೌ.ಸೇ.ಶ 88
(2) ದಿ. 29.4.1994ರ ಸರ್ಕಾರದ ಆದೇಶ ಸಂಖ್ಯೆ ಇಡಿ 28 ಪಿಜಿಸಿ 1994
(3) ದಿ. 30.5.2002ರ ಸರ್ಕಾರದ ಆದೇಶ ಸಂಖ್ಯೆ ಇಡಿ 44 ಪಿಜಿಸಿ 2002
(4) ದಿ. 25.5.2006ರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಸುತ್ತೋಲೆ ಸಂಖ್ಯೆ ನಿ.(ಪ್ರೌ.ಶಿ.) ಭಾಷಾ ಅನುಮತಿ–01 :2006–07
(5) ದಿ. 18.7.2006ರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ ಸಿ4(6) ಪ್ರೌ.ಶಿ.ಭಾ.ನೀತಿ/06–07

ಪ್ರಸ್ತಾವನೆ:

ಮೇಲೆ ಓದಲಾದ (1) ರ ಆದೇಶದಲ್ಲಿ ಇತರೆ ವಿಷಯಗಳ ಜೊತೆಗೆ, ಇತರೆ ರಾಜ್ಯಗಳಿಂದ ಹಾಗೂ ಇತರೆ ದೇಶಗಳಿಂದ ಕರ್ನಾಟಕ ರಾಜ್ಯಕ್ಕೆ ಬರುವ ವಿದ್ಯಾರ್ಥಿಗಳು ಕನ್ನಡವನ್ನು ಕಡ್ಡಾಯವಾಗಿ ಕಲಿಯಬೇಕೆಂಬ ಉಪಬಂಧದಿಂದ ವಿನಾಯ್ತಿ ನೀಡಲಾಗಿತ್ತು. ಸದರಿ ಆದೇಶದ ಸಂಬಂಧಿಸಿದ ಭಾಗವನ್ನು ಈ ಕೆಳಕಂಡಂತೆ ಉದ್ಧರಿಸಿದೆ :

"Exemption from studying Kannada as a compulsory language can be given to students whose parents have come to the State on temporary transfer."

ಅದರನ್ವಯ, ಇತರೆ ರಾಜ್ಯಗಳಿಂದ ಮತ್ತು ಇತರೆ ದೇಶಗಳಿಂದ ಕರ್ನಾಟಕ ರಾಜ್ಯಕ್ಕೆ ಬರುವ ವಿದ್ಯಾರ್ಥಿಗಳಿಗೆ ಕನ್ನಡ ಭಾಷೆಯನ್ನು ಕಡ್ಡಾಯವಾಗಿ ಕಲಿಯುವುದರಿಂದ ವಿನಾಯಿತಿ ನೀಡುವ (ಹಾಗೂ ಅದರ ಬದಲು ಆಲ್ಟರ್‌ನೇಟಿವ್ ಇಂಗ್ಲೀಷ್‌ನ್ನು ತೆಗೆದುಕೊಳ್ಳಲು) ಅನುಮತಿ ನೀಡುವ ವಾಡಿಕೆಯನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯು ಮುಂದುವರೆಸಿದೆ.

2. ಮೇಲೆ (2) ರಲ್ಲಿ ಓದಲಾದ ದಿ. 29.04.1994 ರ ಆದೇಶದನ್ವಯ, ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಗೆ ಅನ್ವಯಿಸುವ ಭಾಷಾ ನೀತಿಯನ್ನು ನಿಗದಿಪಡಿಸಲಾಗಿದ್ದು, ಅದರನ್ವಯ, ಕಂಡಿಕೆ-1 ರಲ್ಲಿನ ಆಸ್ಪದ ಲಭ್ಯವಿರದೇ ಇರುವ ಹಿನ್ನೆಲೆಯಲ್ಲಿ, ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಮೇಲೆ (4) ರಲ್ಲಿ ಓದಲಾದ ದಿ. 25.05.2006 ರ ಸುತ್ತೋಲೆಯನ್ನು ಹೊರಡಿಸಿದ್ದು, ಅದರ ಸಂಬಂಧಿಸಿದ ಭಾಗವನ್ನು ಈ ಕೆಳಗೆ ಉದ್ಧರಿಸಲಾಗಿದೆ.:

1) "ಹೊರದೇಶ ಮತ್ತು ಹೊರ ರಾಜ್ಯದಿಂದ ಆಯಾ ದೇಶ, ರಾಜ್ಯದ ಪಠ್ಯ ಕ್ರಮ ಮತ್ತು ಕೇಂದ್ರ ಪಠ್ಯ ಕ್ರಮವನ್ನು (ICSE/CBSE) ಅಧ್ಯಯನ ಮಾಡಿ ರಾಜ್ಯಕ್ಕೆ ವಲಸೆ ಬರುವ ಮಕ್ಕಳು ರಾಜ್ಯ ಪಠ್ಯ ಕ್ರಮವನ್ನು ಆಯ್ಕೆ ಮಾಡಿಕೊಳ್ಳಲು ಬಯಸುವರೆ/ವರ್ಗಾವಣೆ ಬಯಸುವಲ್ಲಿ 1999-2000 ಪಠ್ಯಕ್ರಮದಲ್ಲಿನ ಭಾಷಾ ನೀತಿಗೆ ಅನುಗುಣವಾಗಿ ಭಾಷಾ ಜೋಡಣೆಯನ್ನು ಕಡ್ಡಾಯವಾಗಿ ತೆಗೆದುಕೊಳ್ಳಲು ಸೂಚಿಸುವುದು. ತ್ರಿಭಾಷಾ ಸೂತ್ರದಂತೆ ಕನ್ನಡವನ್ನು ಪ್ರಥಮ, ದ್ವಿತೀಯ, ಅಥವಾ ತೃತೀಯ ಭಾಷೆಯನ್ನಾಗಿ ಅಧ್ಯಯನ ಮಾಡುವುದು ಕಡ್ಡಾಯ.

2) ರಾಜ್ಯದಲ್ಲಿ ಕೇಂದ್ರ ಪಠ್ಯ ಕ್ರಮ ICSE / CBSE ಅಧ್ಯಯನ ಮಾಡಿ 8,9 ಮತ್ತು 10ನೇ ತರಗತಿಗಳಲ್ಲಿ ರಾಜ್ಯ ಪಠ್ಯಕ್ರಮಕ್ಕೆ ವರ್ಗಾವಣೆ ಬಯಸುವ ವಿದ್ಯಾರ್ಥಿಗಳು, ಕನ್ನಡವನ್ನು ಪ್ರಥಮ, ದ್ವಿತೀಯ ಅಥವಾ ತೃತೀಯ ಭಾಷೆಯನ್ನಾಗಿ ಅಧ್ಯಯನ ಮಾಡುವುದು ಕಡ್ಡಾಯ. ಯಾವುದೇ ಆಲ್‌ಟರ್‌ನೇಟೀವ್ ಇಂಗ್ಲೀಷ್‌ಗೆ ಅವಕಾಶವಿಲ್ಲ.

3) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ 2006-07ನೇ ಶೈಕ್ಷಣಿಕ ಸಾಲಿನಿಂದ 1999-2000 ರಾಜ್ಯ ಪಠ್ಯಕ್ರಮದಲ್ಲಿನ ಭಾಷಾ ಯೋಜನೆಯಂತೆ ಪರೀಕ್ಷೆಗಳನ್ನು ನಡೆಸುವುದು.

4) ಹೊರದೇಶ/ಹೊರ ರಾಜ್ಯದಿಂದ ಹಾಗೂ ರಾಜ್ಯದಲ್ಲಿ, ICSE/CBSE ಯಿಂದ ರಾಜ್ಯ ಪಠ್ಯ ಕ್ರಮಕ್ಕೆ 10ನೇ ತರಗತಿಗೆ ದಾಖಲಾಗುವ ವಿದ್ಯಾರ್ಥಿಗಳು ಕನ್ನಡವನ್ನು ಒಂದು ಭಾಷೆಯನ್ನಾಗಿ ಅಧ್ಯಯನ ಮಾಡಿದಲ್ಲಿ, ಅನುತ್ತೀರ್ಣತೆಯನ್ನು ತಡೆಯಲು 15 ಕೃಪಾಂಕಗಳನ್ನು ನೀಡಲಾಗುವುದು. "

XXX XXX XXX

3. ಕನ್ನಡ ಭಾಷೆಯನ್ನು ಕಡ್ಡಾಯವಾಗಿ ಕಲಿಯಲೇಬೇಕೆಂಬ ಉಪಬಂಧದಿಂದ ವಿನಾಯಿತಿ ನೀಡುವ ಹಾಗೂ ಆಲ್‌ಟರ್‌ನೇಟಿವ್ ಇಂಗ್ಲೀಷ್ ವಿಷಯವನ್ನು ವ್ಯಾಸಂಗ ಮಾಡಲು ಅನುಮತಿ ನೀಡುವ ಸದರಿ ವಾಡಿಕೆಯನ್ನು ಮುಂದುವರೆಸಬೇಕೆಂದು ಕೋರಿ, ವಿಶೇಷವಾಗಿ, ಇತರೆ ರಾಜ್ಯಗಳಿಂದ ಹಾಗೂ ಇತರೆ ದೇಶಗಳಿಂದ ಕರ್ನಾಟಕ ರಾಜ್ಯಕ್ಕೆ ಬಂದಿರುವ ವಿದ್ಯಾರ್ಥಿಗಳ ಪೋಷಕರಿಂದ ಮನವಿಗಳು ಸರ್ಕಾರದಲ್ಲಿ ಸ್ವೀಕೃತವಾಗಿವೆ.

4. ಮೇಲೆ ಉಲ್ಲೇಖಿಸಲಾದ ಮನವಿಗಳಿಗೆ ಪ್ರತಿಕ್ರಿಯಿಸುತ್ತಾ, ಆಯುಕ್ತರು, ಮೇಲೆ (5) ರಲ್ಲಿ ಓದಲಾದ ಅವರ ದಿನಾಂಕ 18-7-2006ರ ಪತ್ರದನ್ವಯ, ವಿದ್ಯಾರ್ಥಿಗಳ ಹಿತದೃಷ್ಟಿಯಿಂದ 10ನೇ ತರಗತಿಯಲ್ಲಿ ರಾಜ್ಯ ಪಠ್ಯಕ್ರಮ ಅನುಸರಿಸುವ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ವಿಶೇಷ ಪ್ರಕರಣವೆಂದು ಪರಿಗಣಿಸಿ ಚಾಲ್ತಿ ಶೈಕ್ಷಣಿಕ ವರ್ಷಕ್ಕೆ(2006-07) ಮಾತ್ರ ಸೀಮಿತಗೊಳಿಸಿ ಆಲ್‌ಟರ್‌ನೇಟಿವ್ ಇಂಗ್ಲೀಷ್ ತೆಗೆದುಕೊಳ್ಳಲು ಸರ್ಕಾರದ ಅನುಮತಿ ಕೋರಿರುತ್ತಾರೆ.

5. ಏತನ್ಮಧ್ಯೆ, ಕನ್ನಡ ಭಾಷಾ ವಿಷಯದ ಬದಲು ಆಲ್ಟರ್‌ನೇಟಿವ್ ಇಂಗ್ಲೀಷ್ ವಿಷಯವನ್ನು ಕಲಿಯಲು ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧಿಕಾರಿಗಳಿಂದ ಈಗಾಗಲೇ ಅನುಮತಿ ಪಡೆದಿರುವ ವಿದ್ಯಾರ್ಥಿಗಳು, ಕನ್ನಡ ಭಾಷೆಯನ್ನು ಕಲಿಯುವುದರಿಂದ ವಿನಾಯತಿ ಕೋರಿ ಹಾಗೂ ಅದರ ಬದಲು ಆಲ್‌ಟರ್‌ನೇಟಿವ್ ಇಂಗ್ಲೀಷ್ ವಿಷಯವನ್ನು ವ್ಯಾಸಂಗ ಮಾಡಲು ಅನುಮತಿ ಕೋರಿ, ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿಗಳನ್ನು ಸಲ್ಲಿಸಿದ್ದರು. ದಿನಾಂಕ 18-9-2006ರ ತನ್ನ ಆದೇಶದನ್ವಯ ಮಾನ್ಯ ಉಚ್ಚ ನ್ಯಾಯಾಲಯ ಸದರಿ ರಿಟ್ ಅರ್ಜಿಯನ್ನು ಹಾಗೂ ಇತರೆ ಸಂಬಂಧಿತ ರಿಟ್ ಅರ್ಜಿಗಳನ್ನು ಅಂತಿಮವಾಗಿ ಇತ್ಯರ್ಥಪಡಿಸಿದ್ದು, ಅದರ ಆಪರೇಟೀವ್ ಭಾಗವನ್ನು ಈ ಕೆಳಗೆ ಉದ್ಧರಿಸಿದೆ :-

"6. Upon hearing the learned counsel for the parties and on careful consideration of the materials on record, what emerges is that, all these petitioners are the students prosecuting their studies in 8th, 9th or 10 standards. They have been permitted to switch over to the State Syllabus before the impugned Circular came to be issued. In terms of the policy as existed prior to the issue of the Circular, they have been permitted to opt for alternative 'English' as one of the language subjects. If that be so, they cannot be now forced to study 'Kannada' in the place of alternative 'English'. If this is allowed, the petitioners who are prosecuting their studies based on

the very permission granted by the officers of the Department, taking into consideration the individual cases, would be affected in their studies. They will be disturbed psychologically, as they would be made to switch over from one subject to the other.

7. It is well established that when an order is passed which clothes a person with certain rights or privileges, the same cannot be withdrawn retrospectively to affect the interest of the person in whose favour such an order is passed and who had altered his position to his detriment. More-so in respect of young children. In the instant case, in respect of all the petitioners, the authorities have passed specific orders permitting them to switch over to the State syllabus without insisting upon them to study 'Kannada' as one of the language subjects. Therefore, I am of the clear view that the impugned Circular cannot be made to operate against the interests of such of the students who have been permitted to prosecute their studies by switching over to the State Syllabus with 'English' as alternative language.

8. Though learned counsel for the petitioners have canvassed several contentions assailing the legality and correctness of the Circular issued by the Government including the contention regarding lack of competence in the second respondent to issue the Circular, it is unnecessary to go into those contentions in these Writ Petitions as the petitioners are bound to succeed on the sole ground that the authorities have themselves permitted these petitioners to switch over to the State Syllabus opting for alternative 'English' as one of the language subjects. An apprehension is also expressed by the learned counsel for the petitioners that in view of the Circular, the schools, imparting education in alternative language subject, are being forced to abandon the said subject of study. It is also submitted that the Examination Board may not also conduct examination for the subject alternative 'English' in view of the impugned Circular.

9. It is made clear that as the petitioners are permitted by the authorities of the Department to opt for alternative English' as one of the language subjects, and in view of the present order passed, the interests of the students cannot be affected. It is the duty of the authorities concerned to ensure that the students who have been permitted to switch over to the State Syllabus by taking alternative 'English' as one of the languages, shall be permitted to prosecute their studies and all arrangements shall be made to ensure that the examination is conducted in the said subject for them.

Accordingly, these Writ Petitions are allowed in part in terms stated above. No costs."

xxx xxx xxx

6. ಕಂಡಿಕೆ–2ರಲ್ಲಿ ಉಲ್ಲೇಖಿಸಲಾದ ವಾಡಿಕೆ ಮುಂದುವರೆದ ಕಾರಣ, ಆಲ್‌ಟರ್‌ನೇಟಿವ್ ಇಂಗ್ಲೀಷ್ ವಿಷಯವನ್ನು ತೆಗೆದುಕೊಳ್ಳಲು ಹಲವು ವಿದ್ಯಾರ್ಥಿಗಳಿಗೆ ಈಗಾಗಲೇ ಸಾರ್ವಜನಿಕ ಶಿಕ್ಷಣ ಇಲಾಖೆಯ ಸಂಬಂಧಿಸಿದ ಅಧಿಕಾರಿಗಳು ಅನುಮತಿಯನ್ನು ನೀಡಿರುತ್ತಾರೆ ಹಾಗೂ ಈ ಹಂತದಲ್ಲಿ ಅವರನ್ನು ಕನ್ನಡ ಭಾಷೆಗೆ ಬದಲಾವಣೆ ಪಡೆದು, ಅದನ್ನು ಕಲಿಯಬೇಕೆಂದು ಏಕಾಏಕಿ ಒತ್ತಾಯಿಸುವುದು ಸಮಂಜಸವಲ್ಲವೆಂದು ಸರ್ಕಾರ ಪರಿಗಣಿಸಿದೆ.

7. ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ, ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 131 ಪಿಜಿಸಿ 2006, ಬೆಂಗಳೂರು, ದಿನಾಂಕ : 2ನೇ ಜನವರಿ 2007**

8. ಪ್ರಸ್ತಾವನೆಯ ವಿವರಣೆಯ ಹಿನ್ನೆಲೆಯಲ್ಲಿ, ಕನ್ನಡ ಭಾಷೆಯನ್ನು ಕಡ್ಡಾಯವಾಗಿ ಕಲಿಯಲೇಬೇಕೆಂಬ ಉಪಬಂಧದಿಂದ ಈಗಾಗಲೇ ಸಂಬಂಧಪಟ್ಟ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರಿಂದ ವಿನಾಯ್ತಿ ಪಡೆದು, ಅದರ ಬದಲು ಆಲ್‌ಟರ್‌ನೇಟಿವ್ ಇಂಗ್ಲೀಷ್ ವಿಷಯವನ್ನು 8 ಅಥವಾ 9 ಅಥವಾ 10ನೇ ತರಗತಿಗಳಲ್ಲಿ ಈಗಾಗಲೇ, ತೆಗೆದುಕೊಂಡ ವಿದ್ಯಾರ್ಥಿಗಳನ್ನು 10ನೇ ತರಗತಿಯನ್ನು ಮುಗಿಸುವವರೆಗೆ ಅದನ್ನೇ (ಅಂದರೆ, ಆಲ್‌ಟರ್‌ನೇಟಿವ್ ಇಂಗ್ಲೀಷ್ ವಿಷಯವನ್ನೇ) ಮುಂದುವರೆಸಲು, ಒಂದು ಬಾರಿಯ ಕ್ರಮವನ್ನಾಗಿ, ಅನುಮತಿ ನೀಡಿ ಸರ್ಕಾರ ಈ ಮೂಲಕ ಆದೇಶಿಸಿದೆ.

9. ಕನ್ನಡವನ್ನು ಒಂದು ಕಡ್ಡಾಯ ವಿಷಯವನ್ನಾಗಿ ಅಭ್ಯಸಿಸುವ ಕುರಿತು ಯಾವುದೇ ಹೊಸ ಪ್ರಕರಣಗಳಿಗೆ ವಿನಾಯಿತಿ ನೀಡಬಾರದೆಂದು ಸಹ ಆದೇಶಿಸಿದೆ.

10. ಕಂಡಿಕೆ 8 ರಲ್ಲಿನ ವಿನಾಯಿತಿಯನ್ನು ಹೊರತುಪಡಿಸಿ, ಕಂಡಿಕೆ 1 ರಲ್ಲಿ ಉಲ್ಲೇಖಿಸಲಾದ ವಿನಾಯಿತಿ ಉಳಿಯುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಹೆಚ್. ಪಡಸಲಗಿ**

ಪಿ.ಆರ್. 62 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಬಿಜಾಪುರ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ಕೆರೆಗಳಿಗೆ ಏತ ನೀರಾವರಿ ಮೂಲಕ ನೀರು ತುಂಬಿಸುವ ಯೋಜನೆಯನ್ನು ಜಲಸಂಪನ್ಮೂಲ ಇಲಾಖೆಯ ಮುಖಾಂತರ ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ:** 1) ಪ್ರಧಾನ ಇಂಜಿನಿಯರ್, ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ರವರ ಪತ್ರಸಂಖ್ಯೆ:ಜಸಂಅ/ ಯೋಮತ/ತಾಸ-6/ಸ.ಇ-3/ಬಿಜಾಪುರ ಜಿಲ್ಲೆಯ ಕೆರೆಗಳು/2006-07ದಿನಾಂಕ 15/11/2006.

2) ಮುಖ್ಯ ಇಂಜಿನಿಯರ್, (ಅಂ.ರಾ.ಜ) ಜ.ಸಂ.ಸ.ಸಂಸ್ಥೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಜಸಅ/ಕೆಜಿಘ/ ಇತರೆ/2006-07 ದಿನಾಂಕ:27/10/2006

**ಪ್ರಸ್ತಾವನೆ**

1) ಬಿಜಾಪುರ ಹಾಗೂ ಬಾಗಲಕೋಟೆ ಜಿಲ್ಲೆಯಲ್ಲಿ ನಿಗಧಿತ ಕಾಲದಲ್ಲಿ ಹಾಗೂ ಅಗತ್ಯ ಪ್ರಮಾಣದಲ್ಲಿ ಮಳೆ ಬಾರದೆ ಇರುವ ಕಾರಣ, ಕೆರೆಗಳಿಗೆ ನೀರು ತುಂಬದೆ ಆ ಭಾಗದ ರೈತರು ನೀರಾವರಿ ಸೌಲಭ್ಯದಿಂದ ವಂಚಿತರಾಗಿರುತ್ತಾರೆ ಹಾಗು ಅಂತರ್ಜಲದ ಮಟ್ಟದಲ್ಲಿ ಕುಸಿತ ಉಂಟಾಗಿರುತ್ತದೆ. ಆದ್ದರಿಂದ ಕೆರೆಗಳಿಗೆ ಏತ ನೀರಾವರಿ ಯೋಜನೆಯ ಮೂಲಕ ನೀರು ತುಂಬುವ ಯೋಜನೆಯನ್ನು ಶೀಘ್ರ ಅನುಷ್ಠಾನಗೊಳಿಸಬೇಕೆಂದು ಈಭಾಗದ ಜನಪ್ರತಿನಿಧಿಗಳು ರೈತ ಮುಖಂಡರು ಮತ್ತು ಸಾರ್ವಜನಿಕರು ಬೇಡಿಕೆಗಳನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

2) ಬಿಜಾಪುರ ಜಿಲ್ಲೆಯಲ್ಲಿ ಒಟ್ಟು 117 ಸಣ್ಣ ನೀರಾವರಿ ಇಲಾಖೆಯ ಕೆರೆಗಳಿರುತ್ತದೆ. ಈ ಪೈಕಿ 13 ಕೆರೆಗಳು ಪ್ರಸ್ತುತ ಕೃಷ್ಣಾ ಮೇಲ್ದಂಡೆ ಯೋಜನೆಯಿಂದ "ಸ್ಕೀಮ್-ಎ" ಅಡಿಯಲ್ಲಿ ಸೃಜಿಸಿರುವ ಅಚ್ಚುಕಟ್ಟಿನ ಪ್ರದೇಶದಲ್ಲಿ ಇರುತ್ತದೆ. 7 ಯೋಜನೆಗಳು ಅತಿ ಎತ್ತರ ಮಟ್ಟದಲ್ಲಿ ಹಾಗೂ ಪ್ರತ್ಯೇಕವಾಗಿ ಇರುವುದರಿಂದ ಅವುಗಳಿಗೆ ನೀರು ತುಂಬುವುದು ತಾಂತ್ರಿಕವಾಗಿ ಕಷ್ಟಕರವಾಗಿರುತ್ತದೆ. 97 ಕೆರೆಗಳಿಗೆ ಏತ ನೀರಾವರಿ ಯೋಜನೆ ಮೂಲಕ ನೀರು ತುಂಬುವ ಪ್ರಸ್ತಾವನೆಗೆ ಸಣ್ಣ ನೀರಾವರಿ ಇಲಾಖೆಯು ಸುಮಾರು ರೂ 202 ಕೋಟಿ ಮೊತ್ತದ ರೇಖಾ ಅಂದಾಜನ್ನು ತಯಾರಿಸಲಾಗಿದೆ. ಆದರೆ"ಸ್ಕೀಮ್-ಬಿ" ಅಡಿ ಲಬ್ಯವಾಗಲಿರುವ ನೀರಿನ ಪರಿಮಾಣ ಮತ್ತು ಬೃಹತ್ ನೀರಾವರಿ ಯೋಜನೆ ಅಚ್ಚುಕಟ್ಟು ಪ್ರದೇಶದಲ್ಲಿ ಸುಮಾರು 89 ಕೆರೆಗಳು ಬರುತ್ತಿದ್ದು, "ಸ್ಕೀಮ್-ಬಿ" ಯೋಜನೆಯನ್ನು ಅನುಷ್ಠಾನಗೊಳಿಸಿದಲ್ಲಿ ಈ ಕೆರೆಗಳಿಗೆ ಪ್ರತ್ಯೇಕವಾದ ಏತ ನೀರಾವರಿ ಯೋಜನೆಗಳನ್ನು ಕೈಗೊಳ್ಳುವುದು ಅವಶ್ಯಕವಿಲ್ಲವೆಂದು ಕಂಡು ಬರುತ್ತದೆ. ಉಳಿದ ಸುಮಾರು 8 ಕೆರೆಗಳು "ಸ್ಕೀಮ್-ಎ" ಅಥವಾ "ಸ್ಕೀಮ್-ಬಿ" ಅಡಿಯ ಅಚ್ಚುಕಟ್ಟು ಪ್ರದೇಶದಲ್ಲಿ ಬಾರದಿರುವ ಕಾರಣ ಇವುಗಳಿಗೆ ನೀರನ್ನು ಒದಗಿಸಲು ಪ್ರತ್ಯೇಕವಾದ ಏತ ನೀರಾವರಿ ಯೋಜನೆಯ ಅವಶ್ಯಕತೆಯು ಕಂಡುಬರುತ್ತದೆ.

3) ಬಾಗಲಕೋಟೆ ಜಿಲ್ಲೆಯಲ್ಲಿ ಒಟ್ಟು 149 ಕೆರೆಗಳಿದ್ದು ಇವುಗಳಿಗೆ ಏತ ನೀರಾವರಿ ಯೋಜನೆ ಮೂಲಕ ನೀರು ತುಂಬಿಸುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. 149 ಕೆರೆಗಳ ಪೈಕಿ 59 ಕೆರೆಗಳು ಪ್ರಸ್ತುತ ಕೃಷ್ಣಾ ಮೇಲ್ದಂಡೆ ಯೋಜನೆಯಿಂದ "ಸ್ಕೀಮ್-ಎ" ಅಡಿಯ ಅಚ್ಚುಕಟ್ಟು ಪ್ರದೇಶದಲ್ಲಿ ಬರುವುದರಿಂದ ಪ್ರತ್ಯೇಕವಾದ ಏತ ನೀರಾವರಿ ಯೋಜನೆಯಿಂದ ನೀರು ತುಂಬುವ ಅವಶ್ಯಕತೆ ಇರುವುದಿಲ್ಲ. ಉಳಿದ 90 ಕೆರೆಗಳಿಗೆ ನೀರು ತುಂಬಿಸಲು ರೂ.150.00 ಕೋಟಿಗಳ ರೇಖಾ ಅಂದಾಜನ್ನು ಸಣ್ಣ ನೀರಾವರಿ ಇಲಾಖೆಯು ತಯಾರಿಸಿದೆ. "ಸ್ಕೀಮ್-ಬಿ" ಅಡಿ ಪ್ರಸ್ತಾಪಿಸಿರುವ ಅಚ್ಚುಕಟ್ಟು ಪ್ರದೇಶದಲ್ಲಿ ಸುಮಾರು 7ಕೆರೆಗಳು ಬರಲಿದ್ದು ಇದನ್ನು ಅನುಷ್ಠಾನಗೊಳಿಸಿದಲ್ಲಿ ಇವುಗಳಿಗೆ ಪ್ರತ್ಯೇಕವಾಗಿ ಏತ ನೀರಾವರಿ ಯೋಜನೆಗಳನ್ನು ಕೈಗೊಳ್ಳುವ ಅವಶ್ಯಕತೆ ಕಂಡು ಬರುವುದಿಲ್ಲ. ಉಳಿದ 83 ಕೆರೆಗಳು "ಸ್ಕೀಮ್-ಎ" ಅಥವಾ "ಸ್ಕೀಮ್-ಬಿ" ಅಡಿಯ ಅಚ್ಚುಕಟ್ಟು ಪ್ರದೇಶದಲ್ಲಿ ಇರದಿರುವ ಕಾರಣದಿಂದ ಇವುಗಳಿಗೆ ಪ್ರತ್ಯೇಕವಾದ 13 ಏತ ನೀರಾವರಿ ಯೋಜನೆಗಳ ನಿರ್ಮಾಣ ಅವಶ್ಯವಿರುವುದು ಕಂಡುಬಂದಿದೆ.

4) ಈ ಹಿನ್ನಲೆಯಲ್ಲಿ ಮಾನ್ಯ ಜಲ ಸಂಪನ್ಮೂಲ ಸಚಿವರ ಅದ್ಯಕ್ಷತೆಯಲ್ಲಿ ದಿನಾಂಕ:30/09/2006 ರಂದು ಸಭೆಯನ್ನು ನಡೆಸಿ, ಈ ವಿಷಯದ ಬಗ್ಗೆ ಚರ್ಚಿಸಿ ಕೆಲವು ತೀರ್ಮಾನಗಳನ್ನು ಕೈಗೊಳ್ಳಲಾಯಿತು. ಈ ವಿಷಯಗಳ ಬಗ್ಗೆ ಅನೇಕ ಸಭೆಗಳಲ್ಲಿ ಕೂಲಂಕುಷವಾಗಿ ಚರ್ಚೆ ಮಾಡಿ ಇದರ ಸರ್ವೆ ಕಾರ್ಯವನ್ನು ಕೈಗೊಂಡು ಯೋಜನಾ ವರದಿಯನ್ನು ತಯಾರಿಸಿ ಸಲ್ಲಿಸುವಂತೆ ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆಗೆ ತಿಳಿಸಲಾಯಿತು. ಅದರಂತೆ ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆಯು ನವೆಂಬರ್ 2006ರಲ್ಲಿ ಒಂದು ಯೋಜನಾ ವರದಿಯನ್ನು ತಯಾರಿಸಿ ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಸಲ್ಲಿಸಿರುತ್ತದೆ.

5) ಈ ಯೋಜನೆಯಲ್ಲಿ ಬಿಜಾಪುರ ಜಿಲ್ಲೆಯ 16 ಕೆರೆಗಳು ಮತ್ತು 5 ಬಾಂದಾರಗಳು ಹಾಗೂ ಬಾಗಲಕೋಟೆ ಜಿಲ್ಲೆಯ 8ಕೆರೆಗಳನ್ನು ತುಂಬಿಸಲು ರೂ.86.10 ಕೋಟಿ ಮೊತ್ತದ ಅಂದಾಜನ್ನು ತಯಾರಿಸಿ ಮಂಜೂರಾತಿಗಾಗಿ ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆಯು ಸಲ್ಲಿಸಿರುತ್ತದೆ. ಈ ಪ್ರಮಾಣದ ಯೋಜನೆಯನ್ನು ಕೈಗೊಳ್ಳಲು ಸಣ್ಣ ನೀರಾವರಿ ಇಲಾಖೆಯಲ್ಲಿ ಅನುದಾನದ ಕೊರತೆ ಇರುತ್ತದೆ. ಮೇಲಾಗಿ ನೀರನ್ನು ಕೃಷ್ಣಾ ನದಿಯಿಂದ ಎತ್ತಲು ಪ್ರಸ್ತಾಪಿಸಿರುವುದರಿಂದ, ಹಾಗೂ ಈ ಯೋಜನೆ ವ್ಯಾಪ್ತಿಯಲ್ಲಿ ಬೃಹತ್ ಮತ್ತು ಮಧ್ಯಮ ನೀರಾವರಿ ಇಲಾಖೆಯ ಹಲವಾರು ಯೋಜನೆಗಳು ಅನುಷ್ಠಾನಗೊಳ್ಳುತ್ತಿರುವುದರಿಂದ ಸದರಿ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆಯ ಮುಖಾಂತರ ಅನುಷ್ಠಾನಗೊಳಿಸುವ ಬಗ್ಗೆ ಆ ಇಲಾಖೆಯ ಅಭಿಪ್ರಾಯ ಕೋರಲಾಗಿದ್ದು ಆ ಇಲಾಖೆಯು ಕೆಲವೊಂದು ಷರತ್ತಿ ಗೊಳಪಟ್ಟು ಸದರಿ ಕಾಮಗಾರಿಯನ್ನು ಜಲಸಂಪನ್ಮೂಲ ಇಲಾಖೆಗೆ ಹಸ್ತಾಂತರಿಸಲು ಸಹಮತಿ ನೀಡಿದೆ.

6) ಈ ಯೋಜನೆ ಬಗ್ಗೆ ಅಗತ್ಯವಿರುವ ನೀರಿನ ಹಂಚಿಕೆ ಕುರಿತು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್,(ಅಂ.ರಾ.ಜ)ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ,ಬೆಂಗಳೂರು ಇವರು ನೀಡಿರುವ ಅಭಿಪ್ರಾಯದ ಬಗ್ಗೆ ಪರಿಶೀಲಿಸಲಾಗಿದೆ.

7) ಪ್ರಸ್ತಾಪಿತ ಯೋಜನೆಯನ್ನು ನಿರಂತರ ಬರಗಾಲಕ್ಕೆ ಒಳಗಾಗುತ್ತಿರುವ ಪ್ರದೇಶ ಗಳಲ್ಲಿ ಕೈಗೊಳ್ಳುತ್ತಿದ್ದು, ಇದರಿಂದ ಅತಿ ಅವಶ್ಯವಾದ ಕುಡಿಯುವ ನೀರಿನ ಪೂರೈಕೆ ಹಾಗೂ ರೈತರಿಗೆ ಕನಿಷ್ಟ ನೀರಾವರಿ ಸೌಲಭ್ಯವನ್ನು ಒದಗಿಸಲು ಉದ್ದೇಶಿಸಿದೆ. ಮೇಲಾಗಿ ರಾಷ್ಟ್ರೀಯ ಹಾಗೂ ರಾಜ್ಯದ ಜಲ ನೀತಿಗಳಲ್ಲಿ ಕುಡಿಯುವ ನೀರಿಗೆ ಪ್ರಥಮ ಆದ್ಯತೆಯನ್ನು ನೀಡಲಾಗಿದೆ. ಅಲ್ಲದೆ, ಕೃಷ್ಣಾ ಮೇಲ್ದಂಡೆ ಯೋಜನೆಯಿಂದ ಸ್ಕೀಂ "ಸ್ಕೀಮ್-ಎ" ಅಥವಾ "ಸ್ಕೀಮ್-ಬಿ" ನಲ್ಲಿ ನೀರಾವರಿ ವಂಚಿತವಾಗುವ ಅಚ್ಚುಕಟ್ಟಿಗೆ ನೀರಾವರಿ ಸೌಲಭ್ಯವನ್ನು ಈ ಯೋಜನೆಯಿಂದ ಒದಗಿಸಬಹುದಾಗಿದೆ.

8) ಮೇಲ್ಕಂಡ ವಿವರಗಳ ಹಿನ್ನಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ/87/ಕೆಜಿದು/2004 ದಿನಾಂಕ: 5ನೇ ಜನವರಿ 2007**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆಯ 16 ಕೆರೆಗಳು ಮತ್ತು 5 ಬಾಂದಾರಗಳು ಮತ್ತು ಬಾಗಲಕೋಟೆ ಜಿಲ್ಲೆಯ 8 ಕೆರೆಗಳಿಗೆ ಏತ ನೀರಾವರಿ ಯೋಜನೆಯನ್ನು ಕೈಗೊಳ್ಳುವ ಮೂಲಕ ನೀರು ತುಂಬಿಸಲು ಸುಮಾರು ರೂ.86.10 ಕೋಟಿ ಅಂದಾಜು ಮೊತ್ತದ ಯೋಜನೆಯನ್ನು ಈ ಕೆಳಕಂಡ ಷರತ್ತಿ ಗೊಳಪಟ್ಟು ಅನುಷ್ಠಾನಗೊಳಿಸಲು ಅನುಮೋದನೆ ನೀಡಲಾಗಿದೆ.

ಅ) ಈ ಯೋಜನೆಯ ಅನುಷ್ಠಾನವನ್ನು ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತಕ್ಕೆ ವಹಿಸುವುದು.

ಆ) ಈ ಯೋಜನೆಗೆ ಅಗತ್ಯವಿರುವ ಅನುದಾನವನ್ನು ಕೃಷ್ಣಾ ಭಾಗ್ಯ ಜಲನಿಗಮ ನಿಯಮಿತಕ್ಕೆ ಆಯವ್ಯಯದ ಅನುದಾನದ ಮೂಲಕ ಅಥವಾ ಹೆಚ್ಚುವರಿಯಾಗಿ IEBR ಹಂಚಿಕೆ ಮೂಲಕ ನೀಡುವುದು.

ಇ) ಈ ಯೋಜನೆಯ ಕಾಮಗಾರಿಯು ಪೂರ್ಣಗೊಂಡ ನಂತರ ಇದನ್ನು ನಿರ್ವಹಣೆಗಾಗಿ ಮತ್ತೆ ಸಣ್ಣ ನೀರಾವರಿ ಇಲಾಖೆಗೆ ಹಸ್ತಾಂತರಿಸುವುದು.

2. This Order falls within the purview of the proviso to Sub-Rule(2) of Rule 17 of the Karnataka Government (Transaction of Business) Rules, 1977, and is issued accordingly.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 48 ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ವಿಷಯ:** ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ವರದಿ ಆಧಾರದನ್ವಯ ಸಣ್ಣ ನೀರಾವರಿ ವಿಭಾಗ, ಬೀದರ್‌ನಲ್ಲಿ ಉಗ್ರಾಣ ಸಾಮಗ್ರಿಗಳ ಖರೀದಿಯಲ್ಲಿ ನಡೆದಿರುವ ಅವ್ಯವಹಾರಗಳಲ್ಲಿ ಭಾಗಿಯಾಗಿರುವರೆನ್ನಲಾದ ಶ್ರೀ ವಿ. ತಿಪ್ಪಣ್ಣ, ಕಾರ್ಯಪಾಲಕ ಇಂಜಿನಿಯರ್, ನಿವೃತ್ತ ಇವರ ವಿರುದ್ಧ ಇಲಾಖಾ ವಿಚಾರಣೆ ಕೈಗೊಳ್ಳುವ ಕುರಿತು.

**ಓದಲಾಗಿದೆ:**

1) ನಿಯಂತ್ರಕರು ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಅಧ್ಯಕ್ಷತೆಯ ತನಿಖಾ ಸಮಿತಿಯು ಸರ್ಕಾರಕ್ಕೆ ಸಲ್ಲಿಸಿರುವ ಮಧ್ಯಂತರ ವರದಿ ದಿನಾಂಕ: 30.06.2001 ಮತ್ತು ಅಂತಿಮ ವರದಿ ದಿನಾಂಕ: 28.02.2002.

2) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಸಿ-1/2003-04/3059 ದಿನಾಂಕ: 24.06.2003.

3) ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ಜಸಂಇ 172 ಸೇಇವಿ 2001, ದಿನಾಂಕ: 08.08.2003.

4) ಸರ್ಕಾರದ ಆದೇಶ ಸಂಖ್ಯೆ: ಸನೀಇ 20 ಸೇಇವಿ 2004 (ಭಾಗ-1), ದಿನಾಂಕ: 29.10.2004.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಅಧ್ಯಕ್ಷತೆಯ ತನಿಖಾ ಸಮಿತಿಯು ದಿನಾಂಕ: 28.2.2002 ರಂದು ನೀಡಿರುವ ಅಂತಿಮ ವರದಿಯ ಆಧಾರದ ಮೇಲೆ ಸಣ್ಣ ನೀರಾವರಿ ವಿಭಾಗ, ಬೀದರ್ ಇಲ್ಲಿ ದಿನಾಂಕ: 01.01.1998 ರಿಂದ 31.10.2000ರ ವರೆಗಿನ ಅವಧಿಯಲ್ಲಿ ಹಲವಾರು ಕಾಮಗಾರಿಗಳಿಗೆ ವಿವಿಧ ಸಂಸ್ಥೆಗಳಿಂದ ಉಗ್ರಾಣ ಸಾಮಗ್ರಿಗಳನ್ನು ಅಗತ್ಯತೆ ಮೀರಿ ನಿಯಮ ಬಾಹಿರವಾಗಿ ಖರೀದಿಸಿರುವುದು ಕೆಳಕಂಡ ಕಾರಣಗಳಿಂದ ಕಂಡುಬಂದಿರುವುದರಿಂದ ಸಂಬಂಧಿಸಿದ ಅಧಿಕಾರಿ/ನೌಕರರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ.

1. ಸಾಮಗ್ರಿಗಳನ್ನು ಖರೀದಿಸಿ, ಕಾಮಗಾರಿಗಳಿಗೆ ಉಪಯೋಗಿಸದೆ ವಿಭಾಗಗಳ ಉಗ್ರಾಣಗಳಲ್ಲಿ ಹಾಗೂ ಉಪ ವಿಭಾಗಗಳ ಶಾಖಾಧಿಕಾರಿಗಳ ನಿವೇಶನದ ವಸ್ತುಗಳ ಲೆಕ್ಕದಲ್ಲಿ (ಎಂ.ಎ.ಎಸ್. ಲೆಕ್ಕದಲ್ಲಿ) ವರ್ಷಾನುಗಟ್ಟಲೆ ಮುಂದುವರೆಸಿರುವುದು.
2. ಕಾಮಗಾರಿಗಳ ಅಂದಾಜುಪಟ್ಟಿಯಲ್ಲಿ ಖರೀದಿಗೆ ಅವಕಾಶ ಕಲ್ಪಿಸದೆ ಸಾಮಗ್ರಿಗಳನ್ನು ಖರೀದಿಸಿ ಕಾಮಗಾರಿಗಳಿಗೆ ಉಪಯೋಗಿಸದಿರುವುದು.
3. ಉಪ ವಿಭಾಗಗಳಿಂದ ಬೇಡಿಕೆ ಇಲ್ಲದಿದ್ದಾಗ್ಯೂ ಸಹ ಅನಾವಶ್ಯಕವಾಗಿ ಸಾಮಗ್ರಿಗಳನ್ನು ಖರೀದಿಸಿರುವುದು.
4. ಹಲವಾರು ವರ್ಷಗಳಿಂದ ಸ್ಥಗಿತಗೊಂಡ ಯೋಜನೆಗಳಿಗೆ ಅನಾವಶ್ಯಕವಾಗಿ ಸಾಮಗ್ರಿಗಳನ್ನು ಖರೀದಿಸಿ ನಿರರ್ಥಕ ವೆಚ್ಚ ಮಾಡಿ ಉಪಯೋಗಿಸದಿರುವುದು.
5. ಖರೀದಿಸಿದ ಸಾಮಗ್ರಿಗಳನ್ನು ನೇರವಾಗಿ ಕಾಮಗಾರಿಗಳಿಗೆ ಲೆಕ್ಕಕ್ಕೆ ಖರ್ಚು ಹಾಕಿ ಉಗ್ರಾಣದ ದಾಸ್ತಾನು ಲೆಕ್ಕಕ್ಕೆ ತೆಗೆದುಕೊಳ್ಳದೆ ಅನಧಿಕೃತವಾಗಿ ಶೇಖರಿಸಿರುವುದು.

ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರು ನೀಡಿರುವ ವರದಿ ಆಧಾರದ ಮೇಲೆ ಮುಖ್ಯ ಇಂಜಿನಿಯರ್, ಸಣ್ಣ

ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ಪತ್ರದಲ್ಲಿ ಈ ಕೆಳಕಂಡ ಅಧಿಕಾರಿಗಳ ಮೇಲೆ ದೋಷಾರೋಪಣಾ ಪಟ್ಟಿಗಳನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಮೇಲೆ ಕ್ರಮಾಂಕ (3) ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಅಪೀಲು) ನಿಯಮಾವಳಿಗಳು 1957ರ ನಿಯಮ 11ರ ಮೇರೆಗೆ ಕಾರಣ ಕೇಳುವ ನೋಟೀಸನ್ನು ಜಾರಿಮಾಡಲಾಗಿತ್ತು.

1) ಶ್ರೀ ಎಂ. ಬಂಗಾರಸ್ವಾಮಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ಪ್ರಸ್ತುತ ಅಧೀಕ್ಷಕ ಅಭಿಯಂತರರು)
2) ಶ್ರೀ ಶ್ಯಾಮರಾವ್ ಕುಲಕರ್ಣಿ, ಅಧೀಕ್ಷಕ ಅಭಿಯಂತರರು
3) ಶ್ರೀ ವಿ. ತಿಪ್ಪಣ್ಣ, ಕಾರ್ಯಪಾಲಕ ಇಂಜಿನಿಯರ್.

ಶ್ರೀ ಎಂ. ಬಂಗಾರಸ್ವಾಮಿ, ಮತ್ತು ಶ್ರೀ ಶ್ಯಾಮರಾವ್ ಕುಲಕರ್ಣಿ ಇವರುಗಳು ತಮ್ಮ ಲಿಖಿತ ಹೇಳಿಕೆಗಳನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ತಮ್ಮ ಮೇಲಿನ ಆಪಾದನೆಗಳನ್ನು ನಿರಾಕರಿಸಿರುತ್ತಾರೆ. ಸದರಿ ಅಧಿಕಾರಿಗಳು ಸಣ್ಣ ನೀರಾವರಿ ವಿಭಾಗ, ಬೀದರ್ ಇಲ್ಲಿ ಕಾರ್ಯನಿರ್ವಹಿಸಿದ ಅವಧಿಯಲ್ಲಿ ಯಾವುದೇ ಉಗ್ರಾಣ ಸಾಮಗ್ರಿಗಳ ಖರೀದಿಗೆ ಸಂಬಂಧಪಟ್ಟಂತೆ ಖರೀದಿ ಆದೇಶವನ್ನು ನೀಡಿರುವುದಿಲ್ಲ ಹಾಗೂ ಈ ಬಗ್ಗೆ ಮೇಲಾಧಿಕಾರಿಗಳು ಸಹ ತಮ್ಮ ವರದಿಯಲ್ಲಿ ಸ್ಪಷ್ಟಪಡಿಸಿರುತ್ತಾರೆ. ಆದ್ದರಿಂದ ಈ ಇಬ್ಬರು ಅಧಿಕಾರಿಗಳು ನೀಡಿರುವ ಲಿಖಿತ ಹೇಳಿಕೆಯನ್ನು ಒಪ್ಪಿ ಮೇಲೆ ಕ್ರಮಾಂಕ (4) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಇವರುಗಳನ್ನು ದೋಷಮುಕ್ತರನ್ನಾಗಿ ಮಾಡಲಾಗಿರುತ್ತದೆ.

ಶ್ರೀ ವಿ. ತಿಪ್ಪಣ್ಣ, ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ) ಇವರು ಇದುವರೆವಿಗೂ ಯಾವುದೇ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿರುವುದಿಲ್ಲವಾದ್ದರಿಂದ ಸದರಿಯವರ ಮೇಲಿನ ಆಪಾದನೆಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಇಲಾಖಾ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 20 ಸೇಇವಿ 2004 (ಭಾಗ–1), ಬೆಂಗಳೂರು, ದಿನಾಂಕ: 19ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸಣ್ಣ ನೀರಾವರಿ ವಿಭಾಗ, ಬೀದರ್ ಇಲ್ಲಿನ ಉಗ್ರಾಣ ಸಾಮಗ್ರಿಗಳನ್ನು ಚಾಲ್ತಿಯಲ್ಲಿರುವ ದರಕ್ಕಿಂತ ಹೆಚ್ಚಿನ ಮೊತ್ತದಲ್ಲಿ ನಿಯಮ ಬಾಹಿರವಾಗಿ ಮತ್ತು ಅನಾವಶ್ಯಕವಾಗಿ ಖರೀದಿ ಮಾಡಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುವರೆನ್ನಲಾದ ಶ್ರೀ ವಿ. ತಿಪ್ಪಣ್ಣ, ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ) ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ಮತ್ತು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಅಪೀಲು) ನಿಯಮಾವಳಿಗಳು 1957ರ ನಿಯಮ 11 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮತ್ತು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ಉತ್ತರ) ಬಿಜಾಪುರ ಇಲ್ಲಿಯ ತಾಂತ್ರಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೂರು ತಿಂಗಳೊಳಗಾಗಿ ಮುಗಿಸಿ ಸರ್ಕಾರಕ್ಕೆ ಇಲಾಖಾ ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ವಿಚಾರಣಾಧಿಕಾರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 1996 ದಿನಾಂಕ: 23.08.2005 ರನ್ವಯ ನಿಗದಿಪಡಿಸಿರುವ ರೂ.6000/– ಸಂಚಿತ ಸಂಭಾವನೆ ಹಾಗೂ ರೂ.1000/– ಗಳ ವಾಹನ ಭತ್ಯೆಯನ್ನು ಪಾವತಿ ಮಾಡುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರಿಗೆ ಆದೇಶಿಸಿದೆ.

ವಿಚಾರಣಾಧಿಕಾರಿಯವರಿಗೆ ಇಲಾಖಾ ವಿಚಾರಣೆ ನಡೆಸಲು ಸ್ಥಳಾವಕಾಶ ಲೇಖನ ಸಾಮಗ್ರಿ ಹಾಗೂ ಇತ್ಯಾದಿ ಸೌಲಭ್ಯಗಳನ್ನು ಒದಗಿಸುವಂತೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರಿಗೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 180

ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕಿನ ಸೇನಾಪುರ ಗ್ರಾಮದ ಬಂಟವಾಡಿ ಹತ್ತಿರ ಕೊಲ್ಲೂರು ಹೊಳೆಗೆ ಅಡ್ಡಲಾಗಿ ಉಪ್ಪು ನೀರು ತಡೆ ಅಣೆಕಟ್ಟು ನಿರ್ಮಾಣ ಕಾಮಗಾರಿಯ ವರ್ಕ್‌ಸ್ಲಿಪ್ ಮತ್ತು ಪರಿಷ್ಕೃತ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** 1) ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ: 4.11.2006ರ ಪತ್ರ ಸಂಖ್ಯೆ: ಮುಇಂ/ಸನೀ(ದ)/ಬೆಂ/ನೀಶಾ/ತಾಸ–2/ಸೇನಾಪುರ ವರ್ಕ್‌ಸ್ಲಿಪ್/2006/2199.

2) ಸರ್ಕಾರದ ದಿನಾಂಕ: 8.6.2005ರ ಆದೇಶ ಸಂಖ್ಯೆ: ಸನೀಇ 24 ಅಪಿಬಂ 2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ: 04.11.2006ರ ಪತ್ರದಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರು ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕಿನ ಸೇನಾಪುರ ಗ್ರಾಮದ ಬಂಟವಾಡಿ ಹತ್ತಿರ ಕೊಲ್ಲೂರು ಹೊಳೆಗೆ ಅಡ್ಡಲಾಗಿ ನಿರ್ಮಿಸಲಾಗಿರುವ ಉಪ್ಪು ನೀರು ತಡೆ ಅಣೆಕಟ್ಟು ನಿರ್ಮಾಣ ಕಾಮಗಾರಿಯ ವರ್ಕ್‌ಸ್ಲಿಪ್ ಒಳಗೊಂಡ 650.00 ಲಕ್ಷ ರೂ.ಗಳ ಪರಿಷ್ಕೃತ ಅಂದಾಜು ಪಟ್ಟಿಗೆ ಸರ್ಕಾರದ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

2) ಉಲ್ಲೇಖ (2) ರಲ್ಲಿರುವ ಸರ್ಕಾರದ ಆದೇಶದ ಕುಂದಾಪುರ ತಾಲ್ಲೂಕಿನ ಸೇನಾಪುರ ಗ್ರಾಮದ ಬಂಟವಾಡಿ ಹತ್ತಿರ ಕೊಲ್ಲೂರು ಹೊಳೆಗೆ ಅಡ್ಡಲಾಗಿ ನಿರ್ಮಿಸಲು ಉದ್ದೇಶಿಸಿದ್ದ ಉಪ್ಪು ನೀರು ತಡೆ ಅಣೆಕಟ್ಟೆ ಕಾಮಗಾರಿಯ 2004–05ನೇ ಸಾಲಿನ ಸಣ್ಣ ನೀರಾವರಿ ಇಲಾಖೆಯ ಮೈಸೂರು ವೃತ್ತದ ದರಪಟ್ಟಿಯಂತೆ ತಯಾರಿಸಲಾದ ರೂ.450 ಲಕ್ಷ ಮೊತ್ತದ ಅಂದಾಜು ಪಟ್ಟಿಗೆ ಅನುಮೋದನೆ ನೀಡಲಾಗಿದೆ.

3) ಸದರಿ ಕಾಮಗಾರಿಗೆ ಆರ್.ಐ.ಡಿ.ಎಫ್. 10ರ ಅಡಿ ನಬಾರ್ಡ್ ಸಂಸ್ಥೆಯಿಂದ ಸಾಲ ಸೌಲಭ್ಯ ಪಡೆಯಲಾಗಿದೆ. ಉದ್ದೇಶಿತ ಬ್ಯಾರೇಜಿನಲ್ಲಿ ಶೇಖರಿಸಲಾಗುವ 6.50 ಘನ ಲಕ್ಷ ಮೀಟರ್ ನೀರಿನಿಂದ ಕುಂದಾಪುರ ತಾಲ್ಲೂಕಿನ ಸೇನಾಪುರ ಗ್ರಾಮದ ಸುತ್ತಮುತ್ತಲಿನ 3,351 ಎಕರೆ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಬಹುದಾಗಿದೆ.

4) ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಕಾಮಗಾರಿಗೆ ತಾಂತ್ರಿಕ ಮಂಜೂರಾತಿ ನೀಡಿ, ಕಾಮಗಾರಿಯನ್ನು ಟೆಂಡರ್ ಆಧಾರದ ಮೇಲೆ ಟೆಂಡರ್‌ಗೆ ಇಡಲಾದ ಮೊತ್ತ ರೂ.4,61,31,802–27 ಗಳ ಮೇಲೆ ಶೇಕಡ 5.95 ಹೆಚ್ಚುವರಿ ಮೊತ್ತಕ್ಕೆ, ಅಂದರೆ ರೂ.4,88,75,553/– ಗಳಿಗೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು 15.12.2005 ರಂದು ವಹಿಸಿರುತ್ತಾರೆ.

5) ಕಾಮಗಾರಿಯು ಪ್ರಗತಿಯಲ್ಲಿದ್ದಾಗ ದಿನಾಂಕ: 2.1.2006 ಮತ್ತು 19.1.2006 ರಂದು ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಪರಿವೀಕ್ಷಣೆ ಮಾಡಿ ನೀಡಿದ ಪರಿವೀಕ್ಷಣಾ ವರದಿಯಲ್ಲಿ ಕಾಮಗಾರಿಯ ಸುರಕ್ಷತೆ ಹಾಗೂ ಭದ್ರತೆಯ ಸಲುವಾಗಿ ನೀಡಿದ ಸೂಚನೆಗಳಂತೆ ಕಾಮಗಾರಿಗಳಲ್ಲಿ ಈ ಕೆಳಕಂಡ ಹೆಚ್ಚುವರಿ ಪರಿಮಾಣವನ್ನು ನಿರ್ವಹಿಸಲಾಗಿದೆ.

(1) ನದಿಯ ತಳಭಾಗವು ನೀರಿನ ಸೆಳೆತದಿಂದ ಕೊಚ್ಚಿಹೋಗಿದ್ದು, ಪಾಯದ ಕಾಂಕ್ರೀಟ್ ಮಟ್ಟವನ್ನು ಹೆಚ್ಚಿಸುವ ಸಲುವಾಗಿ ಪಾಯದ ಆಳವನ್ನು ಮೇಲ್ಭಾಗದ ಏಪ್ರಾನ್ ಮತ್ತು ಕೆಳಭಾಗದ ಏಪ್ರಾನ್ ಸಹಿತ 0.50 ಮೀಟರ್ ಹೆಚ್ಚಿಸಲಾಗಿದೆ.

(2) ಕಟ್ ಆಫ್ ವಾಲ್ ಆಳವನ್ನು ಸಹ 0.50 ಮೀ. ಹೆಚ್ಚಿಸಬೇಕಾಗಿದ್ದು, ಇದರ ಅಗಲವನ್ನು 0.60 ಮೀ.ಗೆ ಅಂದಾಜಿನಲ್ಲಿ ಅವಕಾಶ ಮಾಡಿದ್ದು, ಇದನ್ನು ನಿರ್ವಹಿಸುವಾಗ 4.00 ರಿಂದ 5.00 ಮೀ. ಆಳದವರೆಗೆ 0.60 ಮೀ. ಅಗಲಕ್ಕೆ ನೀರನ್ನು ಹೊರತೆಗೆದು ಕಾಂಕ್ರೀಟ್ ಹಾಕುವುದು ಕಷ್ಟಸಾಧ್ಯವಾಗಿದ್ದುದರಿಂದ ಕಟ್ ಆಫ್'ವಾಲ್‌ನ ಅಗಲವನ್ನು 0.90 ಮೀ. ಅಗಲಕ್ಕೆ ನಿರ್ಮಿಸಲಾಗಿದೆ.

(3) ಸದರಿ ಕಾಮಗಾರಿಯ ಅಂದಾಜಿನಲ್ಲಿ ಕಾಲು ಸೇತುವೆಯನ್ನು 1.00 ಮೀ. ಅಗಲಕ್ಕೆ ನಿರ್ಮಿಸಲು ವಿನ್ಯಾಸಗೊಳಿಸಲಾಗಿದ್ದು, ಈ ಅಗಲದ ಸೇತುವೆ ಒದಗಿಸಿದಲ್ಲಿ ಹಲಗೆಗಳನ್ನು ಕೊಂಡೊಯ್ಯಲು ಕಷ್ಟಸಾಧ್ಯವಾಗುವುದೆಂದು ಕಾಲು ಸೇತುವೆಯ ಅಗಲವನ್ನು 1.50 ಮೀ. ಹೆಚ್ಚಿಸಲಾಗಿದೆ. ಇದಕ್ಕೆ ಅನುಗುಣವಾಗಿ ಬಾಡಿವಾಲ್ ಅಗಲವನ್ನು 2.50 ಮೀ. ನಿಂದ 0.50 ಮೀ. ಹೆಚ್ಚಿಸಿ ಒಟ್ಟು 3.00 ಮೀ. ಅಗಲಕ್ಕೆ ಅಳವಡಿಸಲಾಗಿದೆ.

6) ಕಾಮಗಾರಿಯಲ್ಲಿ ನಿರ್ವಹಿಸಲಾದ ಹೆಚ್ಚುವರಿ ಪರಿಮಾಣಗಳಿಗೆ ಉಂಟಾಗಿರುವ ವೆಚ್ಚ ಹಾಗೂ ಗುತ್ತಿಗೆ ಕರಾರಿನ ಕಲಂ 44ರ ಅನುಸಾರ ದರ ಹೊಂದಾಣಿಕೆಯಂತೆ ಹೆಚ್ಚುವರಿಯಾದ ಮೊತ್ತ ಸೇರಿ ರೂ.2,21,65,307/– ಗಳ ಮೊತ್ತಕ್ಕೆ ವರ್ಕ್‌ಸ್ಲಿಪ್ ತಯಾರಿಸಿದ್ದು ಹಾಗೂ ಈ ವರ್ಕ್‌ಸ್ಲಿಪ್‌ನ ಮೊತ್ತ ಒಳಗೊಂಡಂತೆ ತಯಾರಿಸಲಾದ 675 ಲಕ್ಷ ರೂ.ಗಳ ಪರಿಷ್ಕೃತ ಅಂದಾಜು ಪಟ್ಟಿ ತಯಾರಿಸಲಾಗಿದ್ದು, ಪರಿಷ್ಕೃತ ಅಂದಾಜು ಪಟ್ಟಿಯಂತೆ ಕಾಮಗಾರಿಯ ಲಾಭ ಮತ್ತು ವೆಚ್ಚದ ಅನುಪಾತ ಶೇಕಡ 10ರ ಬಡ್ಡಿ ದರದಲ್ಲಿ 5.75 ಆಗಿದ್ದು, ಕಾಮಗಾರಿಯು ಆರ್ಥಿಕವಾಗಿ ಶಕ್ಯವಾಗಿರುತ್ತದೆ.

7) ದಿನಾಂಕ: 14.03.2006ರ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಮುಂದೆ ಮಂಡಿಸಿದ್ದು, ಸಮಿತಿಯು ಸರ್ಕಾರದ ಅನುಮೋದನೆ ಪಡೆಯುವಂತೆ ಸೂಚಿಸಿದೆ. ಅದರಂತೆ ಪರಿಷ್ಕೃತ ಅಂದಾಜು ಪಟ್ಟಿಗೆ ಸರ್ಕಾರದ ಅನುಮೋದನೆಯನ್ನು ಕೋರಿ ಮುಖ್ಯ ಇಂಜಿನಿಯರ್‌ರವರು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 48 ಅಪಿಬಂ 2006, ಬೆಂಗಳೂರು, ದಿನಾಂಕ: 28ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲೆ, ಕುಂದಾಪುರ ತಾಲ್ಲೂಕಿನ ಸೇನಾಪುರ ಗ್ರಾಮದ ಬಂಟವಾಡಿ ಹತ್ತಿರ ಕೊಲ್ಲೂರು ಹೊಳೆಗೆ ಅಡ್ಡಲಾಗಿ ನಿರ್ಮಿಸಲಾಗಿರುವ ಉಪ್ಪು ನೀರು ತಡೆ ಅಣೆಕಟ್ಟು ನಿರ್ಮಾಣ ಕಾಮಗಾರಿಯಲ್ಲಿ ನಿರ್ವಹಿಸಲಾದ ರೂ.2,21,65,307/– ಗಳ ಮೊತ್ತದ ವರ್ಕ್‌ಸ್ಲಿಪ್ ಒಳಗೊಂಡಿರುವ ರೂ.675 ಲಕ್ಷದ (ರೂಪಾಯಿ ಆರುನೂರು ಎಪ್ಪತ್ತೈದು ಲಕ್ಷ ಮಾತ್ರ) ಪರಿಷ್ಕೃತ ಅಂದಾಜು ಪಟ್ಟಿಗೆ ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

2) ಈ ಆದೇಶವನ್ನು ದಿನಾಂಕ: 11.12.2006ರ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ 1185 ಆಕೋ–1/2006 ರಲ್ಲಿ ನೀಡಲಾಗಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 14

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಸುತ್ತೋಲೆ ಸಂಖ್ಯೆ: ಸಿಆಸುಇ 22 ಸೇಸವಿ 2006, ಬೆಂಗಳೂರು, ದಿನಾಂಕ: 5ನೇ ಜನವರಿ 2007**

**ವಿಷಯ:** ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಸದಸ್ಯತ್ವ ಶುಲ್ಕ ಪಾವತಿ ಮಾಡುವ ಸಂಬಂಧವಾಗಿ ಹೊರಡಿಸಿರುವ ಸುತ್ತೋಲೆಯನ್ನು ಮಾರ್ಪಡಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಸವಿ 93, ದಿನಾಂಕ: 24.12.1993.
2) ಸುತ್ತೋಲೆ ಸಂಖ್ಯೆ: ಸಿಆಸುಇ 19 ಸೇಸವಿ 2005, ದಿನಾಂಕ: 16.11.2005.
3) ದಿನಾಂಕ: 16.11.2006ರ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಪತ್ರ ಸಂಖ್ಯೆ: ಜಿಇಎ:3325:2006–07.

ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಸದಸ್ಯತ್ವ ಶುಲ್ಕವನ್ನು ಪಾವತಿ ಮಾಡುವ ಸಂಬಂಧವಾಗಿ ಉಲ್ಲೇಖ (1) ರಲ್ಲಿರುವ ದಿನಾಂಕ: 24.12.1993ರ ಆದೇಶದಲ್ಲಿ ಸೂಚನೆಗಳನ್ನು ನೀಡಲಾಗಿದೆ. ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಸದಸ್ಯತ್ವ ಶುಲ್ಕ ಪರಿಷ್ಕೃತವಾದ ಹಿನ್ನೆಲೆಯಲ್ಲಿ ಸದಸ್ಯತ್ವ ಶುಲ್ಕವನ್ನು ನೌಕರರ ವೇತನದಿಂದ ಕಡಿತಗೊಳಿಸಿ ಸಂಘಕ್ಕೆ ಪಾವತಿಸುವ ಸಂಬಂಧವಾಗಿ ಉಲ್ಲೇಖ (2) ರಲ್ಲಿರುವ ದಿನಾಂಕ: 16.11.2005ರ ಸುತ್ತೋಲೆಯಲ್ಲಿ ಸೂಚನೆಗಳನ್ನು ನೀಡಲಾಗಿದೆ. ಉಲ್ಲೇಖ (1) ರಲ್ಲಿರುವ ದಿನಾಂಕ: 24.12.1993ರ ಆದೇಶದ ಕಂಡಿಕೆ (ಬಿ) ರಲ್ಲಿ ನೌಕರರು ಸಮ್ಮತಿ ಅಥವಾ ಅಸಮ್ಮತಿ ಸೂಚಿಸದಿದ್ದಲ್ಲಿ ಅಂತಹ ನೌಕರರ ಸದಸ್ಯತ್ವ ಶುಲ್ಕವನ್ನು ಕಡಿತಗೊಳಿಸಲು ಒಪ್ಪಿಗೆ ಇದೆ ಎಂದು ಪರಿಗಣಿಸುವಂತೆ ಸೂಚಿಸಲಾಗಿರುವುದರಿಂದ, ಆ ಸೂಚನೆಯನ್ನು ಉಲ್ಲೇಖ (2) ರಲ್ಲಿರುವ ದಿನಾಂಕ: 16.11.2005ರ ಸುತ್ತೋಲೆಯಲ್ಲಿನ ಕಂಡಿಕೆ 4 ರಲ್ಲಿ ಅಳವಡಿಸಿ ಮಾರ್ಪಾಡು ಆದೇಶ ಹೊರಡಿಸುವಂತೆ ಉಲ್ಲೇಖ (3) ರಲ್ಲಿರುವ ದಿನಾಂಕ: 16.11.2006ರ ಪತ್ರದಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘವು ಕೋರಿರುತ್ತದೆ. ಸಂಘದ ಮನವಿಯನ್ನು ಪರಿಶೀಲಿಸಲಾಗಿದೆ.

ಮೇಲ್ಕಂಡ ಹಿನ್ನೆಲೆಯಲ್ಲಿ ಉಲ್ಲೇಖ (2) ರಲ್ಲಿರುವ ದಿನಾಂಕ: 16.11.2005ರ ಸುತ್ತೋಲೆಯಲ್ಲಿನ ಕಂಡಿಕೆ 4ನ್ನು ಈ ಕೆಳಕಂಡಂತೆ ಮಾರ್ಪಡಿಸಲಾಗಿದೆ.

"4. ಪ್ರತಿಯೊಬ್ಬ ನೌಕರನಿಂದ ಸಂಘದ ವಾರ್ಷಿಕ ವಂತಿಗೆಗೆ ಸಂಬಳದಿಂದ ಕಡಿತಗೊಳಿಸಲು ಸಮ್ಮತಿ ಪತ್ರ ಪಡೆದು ದಾಖಲೆಯಲ್ಲಿ ಇರಿಸುವುದು. ಈ ರೀತಿ ಸಮ್ಮತಿ ಪತ್ರವನ್ನು ಪ್ರಸ್ತುತ ವರ್ಷದಲ್ಲಿ ಕೂಡಲೇ ಪಡೆಯಬಹುದಾಗಿದೆ ಮತ್ತು ಮುಂದಿನ ವರ್ಷಗಳಲ್ಲಿ ನವೆಂಬರ್/ಡಿಸೆಂಬರ್ ತಿಂಗಳುಗಳಲ್ಲಿ ಪಡೆಯಬಹುದಾಗಿದೆ. ನಿಗದಿತ ಅವಧಿಯಲ್ಲಿ ಸಮ್ಮತಿ ಪತ್ರವನ್ನು ನೀಡುವ ಜವಾಬ್ದಾರಿ ನೌಕರರ ಮೇಲಿರುತ್ತದೆ. ನಿಗದಿತ ಅವಧಿಯಲ್ಲಿ ಸಮ್ಮತಿಯನ್ನು ವ್ಯಕ್ತಪಡಿಸದೇ ಇದ್ದಲ್ಲಿ ಅಂತಹ ವ್ಯಕ್ತಿಗಳ ಸಮ್ಮತಿ ಇದೆಯೆಂದು ಭಾವಿಸಿ ಅವರ ವೇತನದಿಂದ ಸದಸ್ಯತ್ವ ಶುಲ್ಕವನ್ನು ಕಡಿತಗೊಳಿಸಬಹುದು.

**ದೇವರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

ಪಿ.ಆರ್. 89

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಶಿವಮೊಗ್ಗ ಜಿಲ್ಲೆಯಲ್ಲಿ ವಿಮಾನ ನಿಲ್ದಾಣ ಸ್ಥಾಪನೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಪತ್ರ ಸಂಖ್ಯೆ: ಮೂಅಇ 16 ರಾಅವಿ 2006, ದಿನಾಂಕ: 12.09.2006.
2) ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ ಹಾಗೂ ಕಾರ್ಯನಿರ್ವಾಹಕ ಸದಸ್ಯರು, ಕರ್ನಾಟಕ ಕೈಗಾರಿಕೆ ಪ್ರದೇಶಾಭಿವೃದ್ಧಿ ಮಂಡಳಿ ಇವರ ಪತ್ರದ ಸಂಖ್ಯೆ: ಕಕೈಪ್ರಮಂ:1740:8780:2006–07, ದಿನಾಂಕ: 21.10.2006.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲೆಯಲ್ಲಿ ಒಂದು ಹೊಸ ವಿಮಾನ ನಿಲ್ದಾಣವನ್ನು ನಿರ್ಮಿಸಲು ಉದ್ದೇಶಿಸಿ ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರದ ಐದು ಸದಸ್ಯ ತಂಡವು ಸ್ಥಳ ಪರಿಶೀಲನೆ ಮಾಡಿ ವಿವರವಾದ ಅಧ್ಯಯನವನ್ನು ನಡೆಸಿರುತ್ತದೆ. ಪರಿಶೀಲನೆಯಿಂದ ವ್ಯಕ್ತಪಟ್ಟಂತೆ ATR ಮಾದರಿಯ ವಿಮಾನಗಳ ಹಾರಾಟಕ್ಕಾಗಿ ಒಂದು ಸಣ್ಣ ವಿಮಾನ ನಿಲ್ದಾಣವನ್ನು ಸದ್ಯ ಹಾಗೂ ಭವಿಷ್ಯದಲ್ಲಿ ಏರ್ ಬಸ್ ಮಾದರಿಯ ವಿಮಾನಗಳ ಅಗತ್ಯವನ್ನು ಒಳಗೊಂಡಿರಲು ಸಾಧ್ಯವಾಗುವಂತೆ ಅಳವಡಿಸಿ ವಿಮಾನ ನಿಲ್ದಾಣವನ್ನು ನಿರ್ಮಿಸುವಂತೆ ಸಲಹೆ ಮಾಡಿದ್ದು, ಅದರನ್ವಯ ಒಂದು ತಾಂತ್ರಿಕ ಹಾಗೂ ಆರ್ಥಿಕ ಸಾಧ್ಯತಾ ಅಧ್ಯಯನವನ್ನು (Techno Economic Feasibility Study) ಕೈಗೊಳ್ಳಲು ಕರ್ನಾಟಕ ರಾಜ್ಯ ಕೈಗಾರಿಕ ಬಂಡವಾಳ ಮತ್ತು ಅಭಿವೃದ್ಧಿ ನಿಗಮ ನಿಯಮಿತ ಇವರಿಗೆ ವಹಿಸಲಾಗಿತ್ತು. ಇದರಂತೆ Master Aero Space Consultants Pvt. Ltd., ಇದರಿಂದ ನಡೆಸಿದ ಅಧ್ಯಯನದ ವರದಿಯಂತೆ ಸುಮಾರು 660 ಎಕರೆಗಳ ವಿಸ್ತೀರ್ಣದಲ್ಲಿ ವಿಮಾನ ನಿಲ್ದಾಣವನ್ನು ನಿರ್ಮಿಸಲು ನಿರ್ಧರಿಸಲಾಯಿತು. ಇದನ್ನಾಧರಿಸಿ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಇವರು ಸದರಿ ವಿಮಾನ ನಿಲ್ದಾಣಕ್ಕೆ ಗುರುತಿಸಿರುವ ಸ್ಥಳದ ಸರ್ವೆ ನಂಬರ್ ನಕಾಶೆ ಇವುಗಳನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಹಾಗೂ ಕಾರ್ಯನಿರ್ವಾಹಕ ಸದಸ್ಯರು ಕರ್ನಾಟಕ ಕೈಗಾರಿಕ ಪ್ರದೇಶಾಭಿವೃದ್ಧಿ ಮಂಡಳಿ ಇವರಿಗೆ ಕಳುಹಿಸಿ ಸಂಬಂಧಿಸಿದ ಜಮೀನುಗಳ ಸ್ವಾಧೀನ ಪ್ರಕ್ರಿಯೆಯನ್ನು ಕೈಗೊಳ್ಳುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಪತ್ರ ದಿನಾಂಕ: 12.09.2006 ರಲ್ಲಿ ಕೋರಲಾಗಿತ್ತು. ಅದರಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಹಾಗೂ ಕಾರ್ಯನಿರ್ವಾಹಕ ಸದಸ್ಯರು, ಕರ್ನಾಟಕ ಕೈಗಾರಿಕ ಪ್ರದೇಶಾಭಿವೃದ್ಧಿ ಮಂಡಳಿ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ತಮ್ಮ ಪತ್ರ

ದಿನಾಂಕ: 21.10.2006 ರಲ್ಲಿ ಶಿವಮೊಗ್ಗ ವಿಮಾನ ನಿಲ್ದಾಣ ನಿರ್ಮಾಣಕ್ಕಾಗಿ ಶಿವಮೊಗ್ಗ ತಾಲ್ಲೂಕು ಸೋಗಾನೆ ಹಾಗೂ ಭದ್ರಾವತಿ ತಾಲ್ಲೂಕು ಸಾವನಕೊಪ್ಪ ಗ್ರಾಮಗಳಲ್ಲಿ 662 ಎಕರೆ 38 ಗುಂಟೆ ಜಮೀನನ್ನು ಭೂಸ್ವಾಧೀನಪಡಿಸಲು ತಗಲಬಹುದಾದ ಒಟ್ಟು ಅಂದಾಜು ವೆಚ್ಚ ರೂ.14,58,49,000–00 ಗಳಲ್ಲಿ ಪ್ರಾರಂಭಿಕವಾಗಿ ಶೇಕಡ 40 ರಷ್ಟು ಅಂದರೆ ರೂ.5,83,39,600–00 ಗಳನ್ನು ಪಾವತಿಸುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಅವಶ್ಯವಿರುವ ಹಣವನ್ನು ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 16 ರಾಅವಿ 2002, ಬೆಂಗಳೂರು, ದಿನಾಂಕ: 3ನೇ ಜನವರಿ 2007**

ಮೇಲಿನ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಶಿವಮೊಗ್ಗ ವಿಮಾನ ನಿಲ್ದಾಣ ನಿರ್ಮಾಣಕ್ಕಾಗಿ ಅವಶ್ಯವಿರುವ 662 ಎಕರೆ 38 ಗುಂಟೆ ಜಮೀನಿನ ಭೂಸ್ವಾಧೀನಕ್ಕಾಗಿ ತಗಲಬಹುದಾದ ಒಟ್ಟು ಅಂದಾಜು ವೆಚ್ಚ ರೂ.14,58,49,000–00 ಗಳಲ್ಲಿ ಕರ್ನಾಟಕ ಕೈಗಾರಿಕೆ ಪ್ರದೇಶಾಭಿವೃದ್ಧಿ ಮಂಡಳಿಗೆ ಭೂಸ್ವಾಧೀನ ಪ್ರಕ್ರಿಯೆ ಕೈಗೊಳ್ಳಲು ಪ್ರಾರಂಭಿಕವಾಗಿ ರೂ.5,83,00,000–00 ಗಳನ್ನು (ರೂ.ಐದು ಕೋಟಿ ಎಂಬತ್ತ ಮೂರು ಲಕ್ಷಗಳು) ಮಾತ್ರ ಭೂಸ್ವಾಧೀನಕ್ಕೆ ಸಂಬಂಧಪಟ್ಟಂತೆ ಅಂತಿಮ ಅಧಿಸೂಚನೆ ಹೊರಡಿಸಿರುವ ಹಾಗೂ ಪರಿಹಾರ ದರವನ್ನು ಬಟವಾಡೆ ಮಾಡುವ ಮುನ್ನ ಎಲ್ಲಾ ಔಪಚಾರಿಕ ಕಾರ್ಯಗಳನ್ನು ಪೂರೈಸುವ ಷರತ್ತಿಗೆ ಒಳಪಟ್ಟು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ.

2. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 5465–01–190–1–05–(ಯೋಜನೆ)–211–ಬಂಡವಾಳ ಇದರಡಿಯಲ್ಲಿ 2006–07ನೇ ಸಾಲಿನಲ್ಲಿ ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿಗೆ ಒದಗಿಸಿರುವ ಆಯವ್ಯಯದಲ್ಲಿ ಭರಿಸತಕ್ಕದ್ದು.

3. ಈ ಮೊತ್ತವನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಹಾಗೂ ಕಾರ್ಯನಿರ್ವಾಹಕ ಸದಸ್ಯರು, ಕರ್ನಾಟಕ ಕೈಗಾರಿಕ ಪ್ರದೇಶಾಭಿವೃದ್ಧಿ ಮಂಡಳಿ ಇವರು ಪೇಯಿಸ್ ರಸೀತಿಯ (Payees Receipt) ಮುಖೇನ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜು ಪಡೆದು ಹಣ ತೆಗೆಯಬಹುದಾಗಿದೆ.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ.ಸಂಖ್ಯೆ ಆಇ 2198 ವೆಚ್ಚ–I/06 ದಿನಾಂಕ: 03.1.2007 ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಮಂಜುಳಗೀತ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

ಪಿ.ಆರ್. 92

## ಸಹಕಾರ ಸಚಿವಾಲಯ

**ವಿಷಯ:** ಸುಳ್ಯ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ/164/ಎಂಆರ್ಇ/94, ದಿನಾಂಕ: 15.12.1996.
2) ಸರ್ಕಾರದ ಆದೇಶ ಸಂಖ್ಯೆ: ಸಇ/305/ಮಾಇಸೇ/2005, ದಿನಾಂಕ: 16.05.2006.
3) ಹೆಚ್ಚುವರಿ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಕೃಮಾಇ/341/ಸಿಬ್ಬಂದಿ–1(ಸಿ)/06, ದಿನಾಂಕ: 17.11.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ರಲ್ಲಿನ ಆದೇಶದಲ್ಲಿ ಸುಳ್ಯ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಒಟ್ಟು 6 ಹುದ್ದೆಗಳನ್ನು ಸೃಜಿಸಲು ಮತ್ತು ಪುತ್ತೂರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯಿಂದ 11 ಹುದ್ದೆಗಳನ್ನು ಸುಳ್ಯ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸ್ಥಳಾಂತರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ಸದರಿ ಹುದ್ದೆಗಳನ್ನು ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸುತ್ತಾ ಬಂದಿದ್ದು, ಮೇಲೆ ಓದಲಾದ (2) ರಲ್ಲಿನ ದಿನಾಂಕ: 16.05.2006ರ ಆದೇಶದಲ್ಲಿ ಸದರಿ ಹುದ್ದೆಗಳ ಅವಧಿಯನ್ನು ದಿನಾಂಕ: 31.12.2006 ರವರೆಗೆ ಮುಂದುವರೆಸಲಾಗಿದೆ. ಸದರಿ ಹುದ್ದೆಗಳನ್ನು ದಿನಾಂಕ: 01.01.2007 ರಿಂದ ಖಾಯಂಗೊಳಿಸಲು ಅಥವಾ ಮುಂದಿನ 2 ವರ್ಷಗಳ ಅವಧಿಗೆ ಮುಂದುವರೆಸುವಂತೆ ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಹೆಚ್ಚುವರಿ ನಿರ್ದೇಶಕರು ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 377 ಮಾಇಸೇ 2006, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸುಳ್ಯ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಮಂಜೂರಾದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ: 01.01.2007 ರಿಂದ 31.12.2008 ರವರೆವಿಗೆ ಮುಂದುವರೆಸಿದೆ.

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| | **ಹೊಸದಾಗಿ ಸೃಜಿಸಲಾದ ಹುದ್ದೆಗಳ ವಿವರ** | |
| 1 | ಕಾರ್ಯದರ್ಶಿ | 1 |
| 2 | ಸಹಾಯಕ ಕಾರ್ಯದರ್ಶಿ | 1 |
| 3 | ಲೆಕ್ಕಿಗ | 1 |
| 4 | ಆಂತರಿಕ ಲೆಕ್ಕಪರಿಶೋಧಕರು | 1 |
| 5 | ಬೆರಳಚ್ಚುಗಾರ | 1 |
| 6 | ಚಾಲಕ | 1 |
| | **ಒಟ್ಟು** | **6** |

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| **ಪುತ್ತೂರು ಸಮಿತಿಯಿಂದ ಸ್ಥಳಾಂತರಿಸಿದ ಹುದ್ದೆಗಳ ವಿವರ** | | |
| 1 | ಮಾರುಕಟ್ಟೆ ಮೇಲ್ವಿಚಾರಕ ದರ್ಜೆ-2 | 1 |
| 2 | ಮಾರುಕಟ್ಟೆ ಮೇಲ್ವಿಚಾರಕ ದರ್ಜೆ-3 | 4 |
| 3 | ಪ್ರಥಮ ದರ್ಜೆ ಸಹಾಯಕ | 1 |
| 4 | ದ್ವಿತೀಯ ದರ್ಜೆ ಸಹಾಯಕ | 2 |
| 5 | ಸಿಪಾಯಿ | 3 |
| | **ಒಟ್ಟು** | 11 |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ ಸಂಖ್ಯೆ: "3475-ಇತರೆ ಸಾಮಾನ್ಯ ಆರ್ಥಿಕ ಸೇವೆಗಳು-107-ಮಾರುಕಟ್ಟೆ ಕ್ರಮಪಡಿಸುವಿಕೆ-02-ಮಾರುಕಟ್ಟೆ ಸಮಿತಿಗಳು (ಯೋಜನೇತರ)" ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/01/ಟಿಎಫ್‌ಟಿ/96 ದಿನಾಂಕ: 10.07.1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಆರ್ಥಿಕ ಇಲಾಖೆಯು ನೀಡಲಾಗಿರುವ ಆರ್ಥಿಕ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಪಿ.ಆರ್. 96 ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

**ವಿಷಯ:** ಕೃಷಿ ಮಾರಾಟ ಇಲಾಖೆಯಲ್ಲಿ ಸ್ಥಾಪಿಸಲಾದ ಕಾನೂನು ಜಾರಿಕೋಶದ ಸಿಬ್ಬಂದಿ-ಮಂಜೂರಾದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಮಾತೂ/327/ಮಾಇಸೇ/86, ದಿನಾಂಕ: 13.11.1992.

2) ಸರ್ಕಾರದ ಆದೇಶ ಸಂಖ್ಯೆ: ಸಇ/45/ಮಾಇಸೇ/2005, ದಿನಾಂಕ: 12.04.2006.

3) ಹೆಚ್ಚುವರಿ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಇವರ ಪತ್ರ ಸಂಖ್ಯೆ: ಕೃಮಾಇ/257/ಸಿಬ್ಬಂದಿ-1(ಸಿ)/06, ದಿನಾಂಕ: 04.09.2006.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ಆದೇಶದಲ್ಲಿ ಕೃಷಿ ಮಾರಾಟ ಇಲಾಖೆಯಲ್ಲಿ ಈ ಕೆಳಕಂಡ ಸಿಬ್ಬಂದಿಗಳನ್ನು ಒಳಗೊಂಡಂತೆ ಒಂದು ಕಾನೂನು ಜಾರಿಕೋಶವನ್ನು ಆದೇಶದ ದಿನಾಂಕದಿಂದ 2 ವರ್ಷಗಳ ಅವಧಿಗೆ ಸೃಜಿಸಲಾಗಿತ್ತು.

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಜಂಟಿ ನಿರ್ದೇಶಕರು | 01 |
| 2 | ಉಪ ನಿರ್ದೇಶಕರು | 02 |
| 3 | ಜಿಲ್ಲಾ ಲೆಕ್ಕಪರಿಶೋಧಕರು | 07 |
| 4 | ಮಾರುಕಟ್ಟೆ ನಿರೀಕ್ಷಕರು | 15 |
| 5 | ಶೀಘ್ರಲಿಪಿಗಾರ | 01 |
| 6 | ಬೆರಳಚ್ಚುಗಾರರು | 02 |
| 7 | ಜವಾನರು | 03 |
| | **ಒಟ್ಟು** | 31 |

ತದನಂತರ ಸದರಿ ಕೋಶವನ್ನು ಸಿಬ್ಬಂದಿಗಳೊಂದಿಗೆ ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರಿಸುತ್ತಾ ಬಂದಿದ್ದು, ಮೇಲೆ ಓದಲಾದ (2) ರಲ್ಲಿನ ದಿನಾಂಕ: 12.04.2006 ರ ಆದೇಶದಲ್ಲಿ ಸದರಿ ಕೋಶವನ್ನು ಹುದ್ದೆಗಳೊಂದಿಗೆ ದಿನಾಂಕ: 31.10.2006ರ ವರೆಗೆ ಮುಂದುವರಿಸಲಾಗಿತ್ತು. ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಸದರಿ ಕೋಶವನ್ನು ಹುದ್ದೆಗಳೊಂದಿಗೆ ದಿನಾಂಕ: 01.11.2006 ರಿಂದ ಖಾಯಂಗೊಳಿಸಲು ಅಥವಾ ಮುಂದಿನ 2 ವರ್ಷಗಳ ಅವಧಿಗೆ ಮುಂದುವರಿಸುವ ಪ್ರಸ್ತಾವನೆಯನ್ನು ಆಯುಕ್ತರು ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 311 ಮಾಇಸೇ 2006, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ ಕೃಷಿ ಮಾರಾಟ ಇಲಾಖೆಯಲ್ಲಿ ಸೃಜಿಸಲಾಗಿರುವ ಕಾನೂನು ಜಾರಿಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ದಿನಾಂಕ: 01.11.2006 ರಿಂದ 31.10.2007 ರವರೆವಿಗೆ ಮುಂದುವರಿಸಲು ಮಂಜೂರಾತಿ ನೀಡಿದೆ:

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಜಂಟಿ ನಿರ್ದೇಶಕರು | 01 |
| 2 | ಉಪ ನಿರ್ದೇಶಕರು | 02 |
| 3 | ಜಿಲ್ಲಾ ಲೆಕ್ಕಪರಿಶೋಧಕರು | 07 |
| 4 | ಮಾರುಕಟ್ಟೆ ನಿರೀಕ್ಷಕರು | 15 |

| ಕ್ರ.ಸಂ. | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 5 | ಶೀಘ್ರಲಿಪಿಗಾರ | 01 |
| 6 | ಬೆರಳಚ್ಚುಗಾರರು | 02 |
| 7 | ಜವಾನರು | 03 |
| | ಒಟ್ಟು | 31 |

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಸಂಖ್ಯೆ: "3475–ಇತರೆ ಸಾಮಾನ್ಯ ಆರ್ಥಿಕ ಸೇವೆಗಳು–107–ಮಾರುಕಟ್ಟೆ ವಿನಿಮಯ–02–ಮಾರುಕಟ್ಟೆ ಸಮಿತಿಗಳು (ಯೋಜನೇತರ) (3475–00–107–0–02" ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/01/ಟಿಎಫ್‌ಟಿ/96 ದಿನಾಂಕ: 10.07.1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಆರ್ಥಿಕ ಇಲಾಖೆಯು ನೀಡಲಾಗಿರುವ ಆರ್ಥಿಕ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಪಿ.ಆರ್. 97

ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಲೋಕ ಸೇವಾ ಆಯೋಗದ ಮಾನ್ಯ ಅಧ್ಯಕ್ಷರು ಹಾಗೂ ಸದಸ್ಯರುಗಳಿಗೆ ಮಧ್ಯಂತರ ಪರಿಹಾರವನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 8 ಎಸ್‌ಆರ್‌ಪಿ 2006, ದಿನಾಂಕ: 29.3.2006.
2) ಆಯೋಗದ ಪತ್ರ ಸಂಖ್ಯೆ: ಆ 638/ಪಿಎಸ್‌ಸಿ/06–07, ದಿನಾಂಕ: 27.6.2006.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಕ್ರಮಾಂಕ (1) ರಲ್ಲಿರುವ ದಿನಾಂಕ: 29.3.2006ರ ತನ್ನ ಆದೇಶದಲ್ಲಿ ಸರ್ಕಾರ 5ನೇ ವೇತನ ಆಯೋಗದ ಅಂತಿಮ ವರದಿಯನ್ನು ಕಾಯ್ದಿರಿಸಿ ದಿನಾಂಕ: 1.4.2006 ರಿಂದ ಜಾರಿಗೆ ಬರುವಂತೆ ರಾಜ್ಯ ಸರ್ಕಾರಿ ನೌಕರರಿಗೆ ಅವರ ಮೂಲ ವೇತನದ ಶೇ.10 ರಷ್ಟು ಮಧ್ಯಂತರ ಪರಿಹಾರವನ್ನು ಮಂಜೂರು ಮಾಡಿದೆ. ಈ ಸೌಲಭ್ಯವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಮಾನ್ಯ ಅಧ್ಯಕ್ಷರು ಹಾಗೂ ಸದಸ್ಯರುಗಳಿಗೆ ನೀಡಿರುವುದಿಲ್ಲ. ಆದಕಾರಣ, ಆಯೋಗದ ಅಧ್ಯಕ್ಷರು ಮತ್ತು ಸದಸ್ಯರುಗಳಿಗೂ ಸಹ ಅವರುಗಳ ವೇತನ ಪರಿಷ್ಕರಣೆ ಬಾಕಿ ಇದ್ದು ರಾಜ್ಯ ಸರ್ಕಾರಿ ನೌಕರರಿಗೆ ನೀಡಲಾಗಿರುವಂತೆ ಮಧ್ಯಂತರ ಪರಿಹಾರವನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ ಕ್ರಮಾಂಕ 2 ರಲ್ಲಿರುವ ಪತ್ರದಲ್ಲಿ ಆಯೋಗವು ಕೋರಿರುತ್ತದೆ. ಸರ್ಕಾರವು ಆಯೋಗದ ಪ್ರಸ್ತಾವನೆಯನ್ನು ಪರಿಶೀಲಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 40 ಸೇಲೋಸೇ 2006, ಬೆಂಗಳೂರು, ದಿನಾಂಕ: 16ನೇ ಜನವರಿ 2007**

ಕರ್ನಾಟಕ ಲೋಕ ಸೇವಾ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರುಗಳಿಗೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 8 ಎಸ್‌ಆರ್‌ಪಿ 2006, ದಿನಾಂಕ: 29.3.2006 ರಲ್ಲಿ ಸರ್ಕಾರಿ ನೌಕರರಿಗೆ ದಿನಾಂಕ: 1.4.2006 ರಿಂದ ಜಾರಿಗೆ ಬರುವಂತೆ ಮೂಲ ವೇತನದ ಶೇಕಡಾ 10 ರಷ್ಟು ಮಂಜೂರು ಮಾಡಿರುವ ಮಧ್ಯಂತರ ಪರಿಹಾರದ ಸೌಲಭ್ಯವನ್ನು ಸದರಿ ಆದೇಶದಲ್ಲಿ ನಿಗದಿಪಡಿಸಿರುವ ಷರತ್ತು ಮತ್ತು ನಿಬಂಧನೆಗಳಿಗೊಳಪಡಿಸಿ ವಿಸ್ತರಿಸಲು ಸರ್ಕಾರದ ಮಂಜೂರಾತಿ ನೀಡಿದೆ.

2. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1533 ವೆಚ್ಚ–5/2006, ದಿನಾಂಕ: 21.12.2006 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವರಾಜು**

ಪಿ.ಆರ್. 116

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವಾ ನಿಯಮಗಳು–1).

**ವಿಷಯ:** ಜಲಸಂಪನ್ಮೂಲ ಇಲಾಖೆಯಲ್ಲಿರುವ ಕಾವೇರಿ ಜಲವಿವಾದಕ್ಕೆ ಸಂಬಂಧಿಸಿದ ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಕಡತ ಸಂಖ್ಯೆ: ಜಸಂಇ 76 ಕಾವಿವಿ 2006.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಕಡತದಲ್ಲಿ ಜಲಸಂಪನ್ಮೂಲ ಇಲಾಖೆಯು ಕಾವೇರಿ ಜಲವಿವಾದ ಕೃಷ್ಣಾ ಜಲವಿವಾದ ಹಾಗೂ ಮಹದಾಯಿ ಜಲವಿವಾದಗಳಂತಹ ಅಂತರ ರಾಜ್ಯ ಜಲವಿವಾದಕ್ಕೆ ಸಂಬಂಧಿಸಿದಂತಹ ಅತಿ ಮುಖ್ಯವಾದ ವಿಷಯಗಳನ್ನು ನಿರ್ವಹಿಸುತ್ತಿರುವ ಕಾರಣ ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) ಹುದ್ದೆಯನ್ನು ದಿನಾಂಕ: 1.1.2007 ರಿಂದ 31.12.2008 ರವರೆಗೆ ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 98 ಸಸಿವಿ 2006, ಬೆಂಗಳೂರು, ದಿನಾಂಕ: 8ನೇ ಜನವರಿ 2007**

ಕರ್ನಾಟಕ ಸರ್ಕಾರ ಸಚಿವಾಲಯ ಜಲಸಂಪನ್ಮೂಲ ಇಲಾಖೆಯಲ್ಲಿನ ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) ಹುದ್ದೆಯನ್ನು ದಿನಾಂಕ: 1.1.2007 ರಿಂದ 31.12.2008 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996ರ ಪ್ರಕಾರ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 117 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ, ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವಧನ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 90 ಎಸ್‌ಇಎನ್ 2004, ದಿನಾಂಕ: 18.01.2006.

2) ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿನಾಂಕ: 31.10.2006.

**ಪ್ರಸ್ತಾವನೆ:**

ದಾವಣಗೆರೆ ಜಿಲ್ಲೆ ಚೆನ್ನಗಿರಿ ತಾಲ್ಲೂಕ್ ಕಛೇರಿಯಲ್ಲಿ ತಹಶೀಲ್ದಾರ್ ಹುದ್ದೆಯಲ್ಲಿ ಶ್ರೀ ಬಿ.ಎಫ್. ತಳವಾರ್ ಅವರು, ಚೆನ್ನಗಿರಿ ತಾಲ್ಲೂಕು ಬಸವಪಟ್ಟಣ ಹೋಬಳಿ ರಾಜಸ್ವ ನಿರೀಕ್ಷಕರ ಹುದ್ದೆಯಲ್ಲಿ ಶ್ರೀ ಗೋಪಾಲನಾಯ್ಕರವರು ಹಾಗೂ ಕತ್ತಲಗಿರಿ ಗ್ರಾಮ ಲೆಕ್ಕಾಧಿಕಾರಿ ಹುದ್ದೆಯಲ್ಲಿ ಶ್ರೀ ಬಿ.ರಾಮಪ್ಪ ರವರು ಕಾರ್ಯನಿರ್ವಹಿಸುತ್ತಿದ್ದಾಗ ದಿನಾಂಕ: 26.08.99 ರಂದು ದಾವಣಗೆರೆ ಜಿಲ್ಲೆ ಹರಪನಹಳ್ಳಿ ತಾಲ್ಲೂಕು ಹುಚ್ಚಂಗಿ ದುರ್ಗದಲ್ಲಿನ ಹೊಂಡದಲ್ಲಿ ಖಾಸಗಿ ಬಸ್ ಅಪಘಾತದಲ್ಲಿ ಬಿದ್ದು ಮೃತರಾದವರ ಪೈಕಿ ಒಂದೇ ಕುಟುಂಬಕ್ಕೆ ಸೇರಿದ 5 ಜನ ವಾರಸುದಾರರಿಗೆ ತಲಾ ರೂ.1.00 ಲಕ್ಷದಂತೆ ಮಂಜೂರಾದ ಹಣವನ್ನು ಸಂಬಂಧಪಟ್ಟ ವಾರಸುದಾರರಲ್ಲದ ಬೇರೆಯವರಿಗೆ ಸಂದಾಯ ಮಾಡಿ ಮೃತರ ಕುಟುಂಬಕ್ಕೆ ಮತ್ತು ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುವ ಆರೋಪಕ್ಕಾಗಿ ಅವರುಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ: 18.01.06ರ ಸರ್ಕಾರಿ ಆದೇಶದಲ್ಲಿ ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2) ರಲ್ಲಿ ಓದಲಾದ ದಿನಾಂಕ: 31.10.06ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವಧನ ಹಾಗೂ ವಾಹನಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 90 ಎಸ್‌ಇಎನ್ 2004(ಭಾ), ಬೆಂಗಳೂರು, ದಿನಾಂಕ: 5ನೇ ಜನವರಿ 2007**

ಸರ್ಕಾರವು ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರು ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇಇವಿ 05, ದಿನಾಂಕ: 23.08.2005 ರನ್ವಯ ರೂ.6,000/- (ಆರು ಸಾವಿರ ರೂಪಾಯಿಗಳು ಮಾತ್ರ) ಗೌರವಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ: 04.03.2002 ರನ್ವಯ ರೂ.1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-051 ಸಾಮಾನ್ಯ ವೆಚ್ಚಗಳು" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 118 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಹೊಸ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಪ್ರಾರಂಭಕ್ಕಾಗಿ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಕಇ 78 ಅಸಂಯೋ 2006, ದಿನಾಂಕ: 30.6.2006.

2) ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ ಇವರ ಏಕ ಕಡತ ಸಂಖ್ಯೆ: ಅಸಂನಿ:ಮೋದೇವಶಾ: ಸಿಆರ್-21/2006-07, ದಿನಾಂಕ: 12.12.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ದಿನಾಂಕ: 30.6.2006ರ ಆದೇಶದಲ್ಲಿ 2006-07ನೇ ಸಾಲಿನಲ್ಲಿ ಹೊಸ 5 ಮೊರಾರ್ಜಿ ವಸತಿ ಶಾಲೆಗಳನ್ನು ತೆರೆಯಲು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (2) ರಲ್ಲಿ ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ, ಇವರು ಪ್ರಸ್ತಾವನೆ ಸಲ್ಲಿಸಿ, ಸದರಿ 5 ಹೊಸ ಶಾಲೆಗಳನ್ನು ಪ್ರಾರಂಭಿಸಲು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ/ಆಯಾ ಜಿಲ್ಲಾ ಹಿಂದುಳಿದ

ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣಾಧಿಕಾರಿಗಳವರು ಸೂಕ್ತ ಕ್ರಮ ಜರುಗಿಸಿರುತ್ತಾರೆ. ಈ ಕಾರ್ಯಕ್ರಮದ ಅನುಷ್ಠಾನಕ್ಕೆ ಸಂಬಂಧಪಟ್ಟವರಿಗೆ ಹಣ ಬಿಡುಗಡೆ ಮಾಡಲು ಲೆಕ್ಕ ಶೀರ್ಷಿಕೆ:2225-03-277-2-63 ರಾಜ್ಯವಲಯ ಯೋಜನೆಯಡಿಯಲ್ಲಿ ಒದಗಿಸಿರುವ ಆಯವ್ಯಯ ರೂ.100.00 ಲಕ್ಷಗಳಲ್ಲಿ ಕೂಡಲೇ ರೂ.50.00 ಲಕ್ಷಗಳನ್ನು ಬಿಡುಗಡೆ ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಅದರಂತೆ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 166 ಅಸಂಯೋ 2006, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2006**

ಸರ್ಕಾರವು ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿದೆ. ಅಲ್ಪಸಂಖ್ಯಾತರ ಹೊಸ 5 ಮೊರಾರ್ಜಿ ದೇಸಾಯಿ ವಸತಿ ಶಾಲೆಗಳನ್ನು ಪ್ರಾರಂಭಿಸಲು ಈ ಕಾರ್ಯಕ್ರಮದ ಅನುಷ್ಠಾನಕ್ಕೆ ಆಯವ್ಯಯದಲ್ಲಿ ಒದಗಿಸಿರುವ ರೂ.1.00 ಕೋಟಿ (ರೂಪಾಯಿ ಒಂದು ಕೋಟಿಗಳು ಮಾತ್ರ) ಗಳನ್ನು ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲಾಗಿದೆ. ಸದರಿ ಅನುದಾನವನ್ನು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ ಇವರಿಗೆ ಮರು ಬಿಡುಗಡೆ ಮಾಡಲು ಆದೇಶಿಸಿದೆ.

ಸದರಿ ವೆಚ್ಚವನ್ನು ಲೆಕ್ಕ ಶೀರ್ಷಿಕೆ: 2225-03-277-2-63 ರಾಜ್ಯವಲಯ ಯೋಜನೆ ಯಡಿಯಲ್ಲಿ ಒದಗಿಸಲಾದ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 21 ಟಿಎಫ್‌ಪಿ 2006, ದಿನಾಂಕ: 2.11.2006 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಬಾಟೆ**

ಪಿ.ಆರ್. 119

ಸರ್ಕಾರದ ಅಧೀನ ಕಾರ್ಯದರ್ಶಿ,

ಸಮಾಜ ಕಲ್ಯಾಣ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಸಿದ್ದೇಶ್ವರ ಶುಗರ್ಸ್ (ಲಿ), ರವರು ಬಿಜಾಪುರ ಜಿಲ್ಲೆ, ಬಸವನ ಬಾಗೇವಾಡಿ ತಾಲ್ಲೂಕಿನ ತೆಲಗಿ ಗ್ರಾಮದಲ್ಲಿ ಸ್ಥಾಪಿಸಲಿರುವ 14 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಐ 260 ಎಸ್‌ಜಿಎಫ್ 04, ದಿನಾಂಕ: 16.03.2005.

2) ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಡಿಇವಿ/56/2006-07, ದಿನಾಂಕ: 13.09.2006.

**ಪ್ರಸ್ತಾವನೆ:**

ಮೇಲೆ ಓದಲಾದ (2) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರದಲ್ಲಿ ಶ್ರೀ ಸಿದ್ದೇಶ್ವರ ಶುಗರ್ಸ್ (ಲಿ), ರವರು ಬಿಜಾಪುರ ಜಿಲ್ಲೆ, ಬಸವನಬಾಗೇವಾಡಿ ತಾಲ್ಲೂಕು, ತೆಲಗಿ ಗ್ರಾಮದಲ್ಲಿ 14 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಉದ್ದೇಶಿಸಿದ್ದಾರೆಂದು ತಿಳಿಸಿ ಈ ಕಾರ್ಖಾನೆ ಸ್ಥಾಪನೆಗೆ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 249 ಎಸ್‌ಜಿಎಫ್ 2006, ಬೆಂಗಳೂರು, ದಿನಾಂಕ: 10ನೇ ಜನವರಿ 2007**

ಶ್ರೀ ಸಿದ್ದೇಶ್ವರ ಶುಗರ್ಸ್ (ಲಿ), ರವರು ಬಿಜಾಪುರ ಜಿಲ್ಲೆ, ಬಸವನಬಾಗೇವಾಡಿ ತಾಲ್ಲೂಕು, ತೆಲಗಿ ಗ್ರಾಮದಲ್ಲಿ 14 ಮೆ.ವ್ಯಾಟ್ ಸಹ ವಿದ್ಯುತ್ ಘಟಕವನ್ನೊಳಗೊಂಡ 2500 ಟಿಸಿಡಿ ಸಾಮರ್ಥ್ಯದ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಸರ್ಕಾರದ ಆದೇಶ ಸಂಖ್ಯೆ: ಸಿಐ 260 ಎಸ್‌ಜಿಎಫ್ 04, ದಿನಾಂಕ: 16.03.2005 ರಲ್ಲಿನ ನಿಬಂಧನೆ (ಅ) ನ್ನು ಸಡಿಲಿಸುವ ಮೂಲಕ ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಲಾಗಿದೆ.

ಮುಂದುವರೆದು ಸಹವಿದ್ಯುತ್ ಘಟಕ ಸ್ಥಾಪನೆಗೆ ಸಂಬಂಧಪಟ್ಟ ಇಲಾಖೆಯಿಂದ ನಿಯಮಾನುಸಾರ ಅನುಮತಿ ಪಡೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಪಿ.ಆರ್. 132

ಪೀಠಾಧಿಕಾರಿ (ಸಕ್ಕರೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## COMMERCE & INDUSTRIES SECRETARIAT

**Subject:** Project proposal of M/s Sri Chamundeswari Sugars Ltd., to establish a "White Crystal Sugar of capacity 5000 TCD, 75 KLPD Distillery/ethanol plant including a bio-compost and 24 MW Co-generation power plant" in Hassan District-Approval for-Orders reg.

**Read:** Proceedings of the 7th State High Level Clearance Committee (SHLCC) meeting held on 28.8.2006.

**PREAMBLE:**

M/s Sri Chamundeswari Sugars Ltd., has proposed to establish a sugar plant in Hassan District to manufacture 5000 TCD white crystal sugar, 75 KLPD Distillery/ethanol including a bio-compost and 24 MW Co-generation power plant with an investment of Rs.146 Crores. Upon development, this Project is expected to provide employment to 350 persons.

In the proposal submitted before the 7th State High Level Clearance Committee meeting [SHLCC] held on 28.8.2006, the Company had requested for various Infrastructure facilities as well as incentives and concessions as envisaged in the New Industrial Policy 2006-11 from the Government. The State High Level Clearance Committee, after detailed discussion of the project proposal of the said Company, vide the proceedings read above, has recommended for approval of the project, to provide infrastructural facilities and to extend incentives & concessions as envisaged in the Industrial Policy of the State Government 2006-11.

Government has examined the recommendations made by the State High Level Clearance Committee in its 7th Meeting held on 28.8.2006 in all aspects. Hence the following order.

**GOVERNMENT ORDER No. CI 457 SPI 2006, Bangalore, Dated: 11th January 2007**

In the circumstances explained above, Government is pleased to accord approval to M/s Chamundeswari Sugars Ltd. to establish a sugar plant in Hassan District to manufacture 5000 TCD white crystal sugar, 75 KLPD Distillery/ethanol including a bio-compost and 24 MW Co-generation power plant with an investment of Rs.146 Crores with the following infrastructural facilities, incentives and concessions:-

**INFRASTRUCTURE FACILITIES:**

**LAND:**

KIADB to acquire through consent award process and allot 316 acres of land, to the company, for the project, in different Sy.Nos. of Gagoor, Ankanahalli, Kattahalli and Doddabyagathavalli villages, Holenarasipura Taluk, Hassan District.

**WATER:**

35,00,000 lpd from Hemavathi river, after obtaining clearance from Water Resources Dept., depending on allocation of water to be given by Cauvery Water Tribunal. The promoter is advised to set up sewage treatment plant, adopt water recycling and water harvesting.

**POWER:**

2000 KVA to be serviced by CESCOM, during the construction period. As regards PPA for 24 MW generating from the generation plant, KPTCL agreed to have minor changes in the PPA.

**INCENTIVES & CONCESSIONS:**

Incentives and Concessions as per the Industrial Policy 2006-11 shall be extended to the company.

**Environment & Pollution Control Clearances:**

The proposed project is covered under Environment Impact Assessment Notification dated: 7.7.2004 of the Ministry of Environment and Forests, New Delhi. The Company shall apply for and obtain pollution & environmental clearances from Karnataka State Pollution Control Board and Ministry of Environment and Forests, Government of India as per the provisions of the Acts and Rules government environmental protection.

**Providing Local Employment**

The Company shall provide employment to local persons in terms of prevailing policy of the Government.

**Others**

The promoters shall submit mile stones/progress in implementation of the project regularly, which shall be monitored by the Departments concerned.

By Order and in the name of the Governor of Karnataka,

**B.V. KUMARASWAMY**

P.R. 133

Under Secretary to Government (ID),
Commerce & Industries Department.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸಹಾಯಕ ನಿರ್ದೇಶಕರು ವೃಂದದ ಅಧಿಕಾರಿಗಳ ವೇತನವನ್ನು ಅರ್ಹತಾ ದಿನಾಂಕದನ್ವಯ ನಿಗದಿಪಡಿಸುವ ಕುರಿತು.

**ಓದಲಾಗಿದೆ:**
1) ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಎಲ್ 130 ಎಸ್‌ಜೆಡಿ 88, ದಿನಾಂಕ: 16.11.1990.
2) ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಎಲ್ 269 ಎಸ್‌ಜೆಡಿ 91, ದಿನಾಂಕ: 01.07.1992.
3) ಮಹಾಲೇಖಪಾಲರು, ಕರ್ನಾಟಕ ಬೆಂಗಳೂರು ಇವರ ಪತ್ರ ಸಂಖ್ಯೆ: ಜಿಇ/XI/ /ಡಿ/06-07/30, ದಿನಾಂಕ: 6.4.2006.
4) ಅಧಿಸೂಚನೆ ಸಂಖ್ಯೆ: ಮಮಇ 80 ಎಸ್‌ಜೆಡಿ 03, ದಿನಾಂಕ: 29.12.2006.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಅಧಿಸೂಚನೆಯಲ್ಲಿ, ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಎಲ್ 130 ಎಸ್‌ಜೆಡಿ 88, ದಿನಾಂಕ: 16.11.1990 ರಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸಹಾಯಕ ನಿರ್ದೇಶಕರ ವೃಂದದ ಅಂತಿಮ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿ ಆಕ್ಷೇಪಣೆ ಸಲಹೆಗಳನ್ನು ಆಹ್ವಾನಿಸಿ, ಸದರಿ ತಾತ್ಕಾಲಿಕ ಜೇಷ್ಟತಾ ಪಟ್ಟಿಗೆ ಸಲ್ಲಿಸಿದ್ದ ಆಕ್ಷೇಪಣೆಗಳನ್ನು ಪರಿಶೀಲಿಸಿ, ಕರ್ನಾಟಕ ರಾಜ್ಯ ನಾಗರಿಕ ಸೇವಾ (ಪದೋನ್ನತಿ, ವೇತನ ಮತ್ತು ಪಿಂಚಣಿ ನಿಯಂತ್ರಣ) ಅಧಿನಿಯಮ, 1973ರ ಪ್ರಕರಣ 4 ರನ್ವಯ ದಿನಾಂಕ: 1.1.1990 ರಲ್ಲಿರುವಂತೆ ಅರ್ಹತಾ ದಿನಾಂಕಗಳನ್ನು ನಿಗದಿಪಡಿಸಿ, ಅಂತಿಮ ಜೇಷ್ಟತಾ ಪಟ್ಟಿಯನ್ನು ಹೊರಡಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಅಧಿಸೂಚನೆಯಲ್ಲಿ, ದಿನಾಂಕ: 01.01.1990 ರಲ್ಲಿದ್ದಂತೆ ಪ್ರಕಟಿಸಿದ್ದ ಅಂತಿಮ ಜೇಷ್ಟತಾ ಪಟ್ಟಿಯಲ್ಲಿ ಒಳಗೊಂಡಿರುವ ಕೆಲವು ಸಹಾಯಕ ನಿರ್ದೇಶಕರು ಕರ್ತವ್ಯದಲ್ಲಿ ಮುಂದುವರೆದಿರುವರೆಂಬ ಕಾರಣದಿಂದ, ಪುನಃ ದಿನಾಂಕ: 01.01.1991 ರಲ್ಲಿರುವಂತೆ ಸಹಾಯಕ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಟತಾ ಪಟ್ಟಿಯನ್ನು ಪ್ರಕಟಿಸಲಾಗಿತ್ತು. ಸದರಿ ತಾತ್ಕಾಲಿಕ ಜೇಷ್ಟತಾ ಪಟ್ಟಿಯಲ್ಲಿ, ಈಗಾಗಲೆ ಜೇಷ್ಟತೆಯನ್ನು ಅಂತಿಮಗೊಳಿಸಿದ್ದ ಅಧಿಕಾರಿಗಳನ್ನೂ ಸಹ ಒಳಪಡಿಸಿರುವುದರಿಂದ ದೊಡ್ಡ ಪ್ರಮಾಣದ ಲೋಪದೋಷಗಳು ಒಳಗೊಂಡಿರುವುದನ್ನು ಪರಿಗಣಿಸಿ, ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಅಧಿಸೂಚನೆಯಲ್ಲಿ, ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಎಲ್ 269 ಎಸ್‌ಜೆಡಿ 91, ದಿನಾಂಕ: 01.07.1992 ರಲ್ಲಿ ಪ್ರಕಟಿಸಿದ್ದ ತಾತ್ಕಾಲಿಕ ಜೇಷ್ಟತಾ ಪಟ್ಟಿಯನ್ನು ಹಿಂಪಡೆಯಲಾಗಿದೆ.

ಹಿರಿಯ ಲೆಕ್ಕಾಧಿಕಾರಿ, ಮಹಾಲೇಖಪಾಲರ ಕಛೇರಿ, ಬೆಂಗಳೂರು ಇವರು ಪತ್ರ ಸಂಖ್ಯೆ: ಜಿಇ/XI/ಡಿ/06-07/30, ದಿನಾಂಕ: 6.4.2006ರ ಪತ್ರದಲ್ಲಿ, ಅರ್ಹತಾ ದಿನಾಂಕದನ್ವಯ ವೇತನವನ್ನು ನಿಗದಿಪಡಿಸಲು 1973ರ ಪ್ರಕರಣ 4 ರನ್ವಯ ಪದೋನ್ನತಿಗಳನ್ನು ಪುನರವಲೋಕಿಸಿ, ಎಲ್ಲ ವೃಂದದ ಜೇಷ್ಟತಾ ಪಟ್ಟಿಯನ್ನು ಹೊರಡಿಸಿದ್ದಲ್ಲಿ ವೇತನ ನಿಗದಿಪಡಿಸಲು ಮುಂದಿನ ಕ್ರಮ ಕೈಗೊಳ್ಳಲಾಗುವುದೆಂದು ಸೂಚಿಸಿರುತ್ತಾರೆ.

ಸದರಿ ಅಧಿನಿಯಮದ ಪ್ರಕರಣ 4 ರನ್ವಯ ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಸೂಚಿಸಿರುವಂತೆ, ಸಹಾಯಕ ನಿರ್ದೇಶಕರ ವೃಂದದ ಅಧಿಕಾರಿಗಳ ಹೆಸರಿನ ಎದುರಿನಲ್ಲಿ, ನಿಗದಿಪಡಿಸಿರುವ ಅರ್ಹತಾ ದಿನಾಂಕದನ್ವಯ ವೇತನವನ್ನು ನಿಗದಿಪಡಿಸಿ, ವಾಸ್ತವ ಪದೋನ್ನತಿ ದಿನಾಂಕದಿಂದ ಆರ್ಥಿಕ ಸೌಲಭ್ಯವನ್ನು ನೀಡಬೇಕಾಗುತ್ತದೆ. ಆದ್ದರಿಂದ ಈ ಕೆಳಗೆ ಸೂಚಿಸಿದಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 80 ಎಸ್‌ಜೆಡಿ 2003, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2006**

ಕರ್ನಾಟಕ ರಾಜ್ಯ ನಾಗರಿಕ ಸೇವಾ (ಪದೋನ್ನತಿ, ವೇತನ ಮತ್ತು ಪಿಂಚಣಿ ನಿಯಂತ್ರಣ) ಅಧಿನಿಯಮ, 1973ರ ಪ್ರಕರಣ 4 ರನ್ವಯ, ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಎಲ್ 130 ಎಸ್‌ಜೆಡಿ 88, ದಿನಾಂಕ: 16.11.1990 ರಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸಹಾಯಕ ನಿರ್ದೇಶಕರ ವೃಂದದ ಅಧಿಕಾರಿಗಳ ಅಂತಿಮ ಜೇಷ್ಟತಾ ಪಟ್ಟಿಯನ್ನು ಪ್ರಕಟಿಸಿ ಅವರ ಹೆಸರಿನ ಎದುರಿಗೆ ವಾಸ್ತವ ಪದೋನ್ನತಿ ದಿನಾಂಕವನ್ನು ಸೂಚಿಸಿ ಅರ್ಹತಾ ದಿನಾಂಕವನ್ನು ನಿಗದಿಪಡಿಸಲಾಗಿದೆ. ಸದರಿ ಜೇಷ್ಠತಾ ಪಟ್ಟಿಯಲ್ಲಿ ಸೂಚಿಸಿರುವಂತೆ ಈ ಕೆಳಗೆ ಸೂಚಿಸಿದ ಅಧಿಕಾರಿಗಳ ಎದುರಿಗೆ ಸೂಚಿಸಿರುವ ಅರ್ಹತಾ ದಿನಾಂಕವು ವಾಸ್ತವ ಪದೋನ್ನತಿ ದಿನಾಂಕಕ್ಕಿಂತ ಪೂರ್ವಾನ್ವಯವಾಗಿದ್ದಲ್ಲಿ, ಅರ್ಹತಾ ದಿನಾಂಕದಿಂದ ಪದೋನ್ನತಿ ಹೊಂದಿರುವರೆಂದು ಪರಿಗಣಿಸಿ, ಕಾಲ್ಪನಿಕವಾಗಿ ವೇತನ ನಿಗದಿಪಡಿಸಿ ವಾಸ್ತವ ಪದೋನ್ನತಿ ದಿನಾಂಕದಿಂದ ಆರ್ಥಿಕ ಸೌಲಭ್ಯ ಪಡೆಯಲು ಹಾಗೂ ಅರ್ಹತಾ ದಿನಾಂಕವು ವಾಸ್ತವ ಪದೋನ್ನತಿ ದಿನಾಂಕದ ನಂತರ ಉತ್ತರಾನ್ವಯವಾಗಿದ್ದಲ್ಲಿ ಅರ್ಹತಾ ದಿನಾಂಕದಿಂದ ಪದೋನ್ನತಿ ಹೊಂದಿರುವರೆಂದು ಪರಿಗಣಿಸಿ ಸದರಿ ದಿನಾಂಕದಿಂದ ವೇತನ ನಿಗದಿಪಡಿಸಿ ಆರ್ಥಿಕ ಸೌಲಭ್ಯ ಪಡೆಯಲು ಮಂಜೂರಾತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ವಾಸ್ತವ ಪದೋನ್ನತಿ ದಿನಾಂಕ | ಅರ್ಹತಾ ದಿನಾಂಕ |
|---|---|---|---|
| 1 | ರಮಾ ಅಯ್ಯರ್ ಎನ್. | | |
| 2 | ಶೈಕ್ ಜಿ.ಎನ್. | – | 22.03.1959 |
| 3 | ಚಿನ್ನಪ್ಪ ಸಿ.ಪಿ. | – | 01.05.1969 |
| 4 | ಪುರಾಣಿಕ್ ಬಿ.ಎನ್. | 01.05.1969 | 03.07.1969 |
| 5 | ಡೇವಿಡ್ ಆರ್.ಎನ್. | 10.09.1971 | 21.07.1969 |
| 6 | ಮುದ್ದೇಬಿಹಾಳ್ ಪಿ.ವಿ. | 21.07.1969 | 10.09.1971 |
| 7 | ತಿಮ್ಮಪ್ಪ ಶೆಟ್ಟಿ ಎನ್. | 05.08.1976 | 28.05.1975 |

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ವಾಸ್ತವ ಪದೋನ್ನತಿ ದಿನಾಂಕ | ಅರ್ಹತಾ ದಿನಾಂಕ |
|---|---|---|---|
| 8 | ಕಲವೀರಕ್ಕನವರ್ ಎಸ್.ಬಿ. | 15.10.1980 | 05.08.1976 |
| 9 | ಪಾಟೀಲ್ ಬಿ.ಸಿ. | 28.05.1975 | 28.04.1979 |
| 10 | ನರಸಿಂಹಪ್ಪ ಎ.ಡಿ. | 28.04.1979 | 18.10.1979 |
| 11 | ತರೀನ್ ಜಡ್.ಆರ್. | 15.10.1980 | 15.10.1980 |
| 12 | ಕೃಷ್ಣರಾಜು ವಿ. | 15.10.1980 | 15.10.1980 |
| 13 | ಠಾಕೂರ್ ಜಿ.ಎಲ್. | 18.10.1979 | 15.10.1980 |
| 14 | ಗುಂಬೋಳ್ ಬಿ.ಎಂ. | 15.10.1980 | 15.10.1980 |
| 15 | ರಾಜಶೇಖರ್ ಟಿ.ವಿ. | 01.05.1981 | 01.05.1981 |
| 16 | ಸಲೀಮುನ್ನೀಸಾ ಜಡ್.ಎ. | 06.01.1983 | 01.05.1981 |
| 17 | ಪೊನ್ನಮ್ಮ ಕೆ.ಎ. | – | 06.01.1983 |
| 18 | ಕೃಷ್ಣಪ್ಪ ಜಿ.ವಿ. | 01.05.1981 | 06.01.1983 |
| 19 | ತಮ್ಮಣ್ಣನವರ್ ಎಸ್.ಎಂ. | 06.01.1983 | 06.01.1983 |
| 20 | ಕದಕೋಲ್ ವಿ.ಜಿ. | 24.01.1985 | 06.01.1983 |
| 21 | ಲಿಂಗಯ್ಯ ಕೆ.ಎಂ. | 06.01.1983 | 06.01.1983 |
| 22 | ಬೋರಯ್ಯ ಕೆ.ಟಿ. | – | 06.01.1983 |
| 23 | ನಾಯಕ್ ಎಂ.ಟಿ. | 06.01.1983 | 06.01.1983 |
| 24 | ದೇವರತ್ನ ಎಂ.ವಿ. | 06.01.1983 | 06.01.1983 |
| 25 | ಭೋಜಮ್ಮ ಎಂ.ಡಿ. | – | 06.01.1983 |
| 26 | ಪಿಳ್ಳೈ ಪಿ.ಎಸ್. | 06.01.1983 | 06.01.1983 |
| 27 | ಕರಡಿ ಆರ್.ಬಿ. | 06.01.1983 | 06.01.1983 |
| 28 | ಶಂಕರನಾರಾಯಣರಾವ್ ಎಸ್.ವಿ. | 06.01.1983 | 06.01.1983 |
| 29 | ಪಂಡಿತ್ ಜಿ.ಎಸ್. | 06.01.1983 | 06.01.1983 |
| 30 | ವಿಜಯ ಎಂ. | 06.01.1983 | 06.01.1983 |
| 31 | ಭಾನು ಎಸ್.ಟಿ. | 06.01.1983 | 01.06.1983 |
| 32 | ಡಿ.ಎಫ್. ಶಿಥೋಲೆ | 06.01.1983 | 24.01.1985 |
| 33 | ಪುಟ್ಟಸ್ವಾಮಯ್ಯ ಹೆಚ್.ಸಿ. | 06.01.1983 | 24.01.1985 |
| 34 | ಮಹದೇವಯ್ಯ ಎಂ.ಎ. | 24.01.1985 | 24.01.1985 |
| 35 | ಮಣ್ಣೂರ್ ಎಸ್.ಆರ್. | 24.01.1985 | 24.01.1985 |
| 36 | ತಮ್ಮಯ್ಯ ಟಿ. | – | 24.01.1985 |
| 37 | ಗಣಜಲ ಖೇಡ್ ಎನ್.ಎಸ್. | 06.01.1983 | 24.01.1985 |
| 38 | ದೇಶ ಪಾಂಡೆ ವಿ.ಎಸ್. | 24.01.1985 | 24.01.1985 |
| 39 | ನಂಜುಂಡರಾಜ್ ಅರಸ್ ಎ.ಎನ್. | 24.01.1985 | 24.01.1985 |
| 40 | ವನಜಾಕ್ಷಿ ಹೆಚ್.ಎಸ್. | – | 28.02.1985 |
| 41 | ಚವ್ಹಾಣ್ ಸಿ.ಎಲ್. | 24.01.1985 | 08.12.1987 |
| 42 | ನುಸರತ್ ಫಾತಿಮಾ | 08.12.1987 | 08.12.1987 |
| 43 | ಜವಳಗಿ ಎಸ್.ಬಿ. | – | 08.12.1987 |
| 44 | ರಾಥೋಡ್ ಎಂ.ಆರ್. | 24.01.1985 | 08.12.1987 |
| 45 | ಮಾದಯ್ಯ ಎ. | 24.01.1985 | 22.05.1989 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶಿವಕುಮಾರ್**

ಪಿ.ಆರ್. 134

ಸರ್ಕಾರದ ಅಧೀನ ಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ವಸತಿ ಸಚಿವಾಲಯ

**ವಿಷಯ:** ಬಾಗಲಕೋಟೆ ಜಿಲ್ಲೆ ಬಾದಾಮಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ವಇ/42/ಹೆಚ್ಎಂ/1998, ದಿನಾಂಕ: 10.04.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಬಾಗಲಕೋಟೆ ಜಿಲ್ಲೆ ಬಾದಾಮಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ/111/ಹೆಚ್ಎಎಸ್/2006, ಬೆಂಗಳೂರು, ದಿನಾಂಕ: 10ನೇ ಜನವರಿ 2007**

ಮೇಲ್ಕಂಡ ಸಂದರ್ಭದಲ್ಲಿ ಬಾಗಲಕೋಟೆ ಜಿಲ್ಲೆ ಬಾದಾಮಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಶ್ರೀ ಮಹಾಗುಂಡಪ್ಪ ಈರಬಸಪ್ಪ ಮಣ್ಣೂರ ಉಲ್ಲಾಗಡ್ಡಿ ಓಣಿ, ಬಾದಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | ಸಾಮಾನ್ಯ |
| 2 | ಶ್ರೀ ಶಮಸುದ್ದೀನ್ ಮೋದಿನಸಾಬ ಭಗವಾನ (ದೊಡ್ಮನಿ), ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. | ಅಲ್ಪಸಂಖ್ಯಾತ |
| 3 | ಶ್ರೀಮತಿ ಚಂದ್ರವ್ವ ರಂಗಪ್ಪ ಗಾಜಿ, ಚಲವಾದಿ ಓಣಿ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. | ಎಸ್.ಸಿ. |
| 4 | ಶ್ರೀ ಈಶ್ವರ ಮಹಾಗುಂಡಪ್ಪ ಗಾಣಿಗೇರ, ಗಾಣಿಗೇರ ಓಣಿ, ಬಾದಾಮಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. | ಬಿ.ಸಿ.ಎಂ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಂಗಮ್ಮ**

ಪಿ.ಆರ್. 135 ಪೀಠಾಧಿಕಾರಿ-2, ವಸತಿ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಬೆಂಗಳೂರು ನಗರ ಸಂಚಾರ ಅಭಿವೃದ್ಧಿ ಯೋಜನೆ-2010 (B-Trac 2010) ಯೋಜನೆಯನ್ನು ಅನುಷ್ಠಾನಗೊಳಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ:ಹೆಚ್‌ಡಿ:73:ಪಿಒಪಿ:2006 ದಿನಾಂಕ:22/05/2006
2) ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಇವರ ಪತ್ರಸಂಖ್ಯೆ:ಬಿ.ಟ್ರಾಕ್/2010/2005 ದಿನಾಂಕ: 10/08/2006.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರಸಂಖ್ಯೆ:ಸಿ.ಟಿ.ಆರ್.ಎಸ್:02: 2006-07 ದಿನಾಂಕ:21/08/2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ, ಬೆಂಗಳೂರು ನಗರ ಸಂಚಾರ ಅಭಿವೃದ್ಧಿ ಯೋಜನೆ-2010 (B-Trac 2010) ಈ ಯೋಜನೆಯು 5 ವರ್ಷಗಳ ಯೋಜನೆಯಾಗಿದ್ದು, 2006-07ರಿಂದ ಆರಂಭಿಸಿ ಮುಂಬರುವ ನಾಲ್ಕು ವರ್ಷಗಳಲ್ಲಿ ವಿವಿಧ ಚಟುವಟಿಕೆಗಳಿಗೆ ಅಗತ್ಯವಾಗಿರುವ ಅಂದಾಜು ವೆಚ್ಚಗಳೊಂದಿಗೆ ಅನುಷ್ಠಾನಗೊಳಿಸುವ ಕಾರ್ಯವನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿರ್ಮಾಣ ನಿಗಮಕ್ಕೆ (ಕೆಆರ್‌ಡಿಸಿಎಲ್) ವಹಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿರುತ್ತದೆ. ಈ ಇಲಾಖೆಯೊಂದಿಗೆ Memorandum of Understanding ಅನ್ನು ಮಾಡಿಕೊಂಡ ನಂತರ KRDCL ಸಂಸ್ಥೆಯು ಈ ಯೋಜನೆಯನ್ನು ಅನುಷ್ಠಾನಗೊಳಿಸತಕ್ಕದ್ದೆಂದು ತಿಳಿಸಲಾಗಿರುತ್ತದೆ.

ಮೇಲೆ ಓದಲಾದ (2)ರ ಪತ್ರ ದಿನಾಂಕ:10/08/2006ರಲ್ಲಿ ಪೊಲೀಸ್ ಆಯುಕ್ತರು, ಬೆಂಗಳೂರು ನಗರ ರವರು ಬೆಂಗಳೂರು ನಗರ ಸಂಚಾರ ಅಭಿವೃದ್ಧಿ ಯೋಜನೆ-2010 (B-Trac 2010) ಅನ್ನು ಅನುಷ್ಠಾನಗೊಳಿಸಲು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮದೊಂದಿಗೆ (ಕೆ.ಆರ್.ಡಿ.ಸಿ.ಎಲ್) ದಿನಾಂಕ:09/08/2006ರಂದು ಒಪ್ಪಂದ (Memorandum of Understanding) ಮಾಡಿಕೊಳ್ಳಲಾಗಿರುತ್ತದೆಂದು ತಿಳಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರ ದಿನಾಂಕ:21/08/2006ರಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, ಬೆಂಗಳೂರು ನಗರದ ಸಂಚಾರವನ್ನು ಸುಗಮಗೊಳಿಸುವ ದೃಷ್ಟಿಯಿಂದ, ಸಂಚಾರ ಅಭಿವೃದ್ಧಿ ಯೋಜನೆ ಬಿ-ಟ್ರಾಕ್-2010ನ್ನು ಅನುಷ್ಠಾನಗೊಳಿಸುವ ಸಂಬಂಧ 2006-07ನೇ ಸಾಲಿನ ಯೋಜನೆಗೆ ರೂ.44.00 ಕೋಟಿಗಳನ್ನು ವಿವಿಧ ಸಂಚಾರ ಅಭಿವೃದ್ಧಿ ಕಾರ್ಯಗಳಿಗಾಗಿ ಉಪಯೋಗಿಸಲು ಕರ್ನಾಟಕ ರಾಜ್ಯ ರಸ್ತೆ ಅಭಿವೃದ್ಧಿ ನಿರ್ಮಾಣ ನಿಗಮ (ಕೆ.ಆರ್.ಡಿ.ಸಿ.ಎಲ್) ರವರ ಸಹಯೋಗದೊಂದಿಗೆ ನೆರವೇರಿಸಲು ಸರ್ಕಾರದ ಆದೇಶವಾಗಿರುವ ಹಿನ್ನೆಲೆಯಲ್ಲಿ ಪೊಲೀಸ್ ಕಮೀಷನರ್, ಬೆಂಗಳೂರು ನಗರರವರು ಸಲ್ಲಿಸಿರುವ ವಿವರಗಳ ಆಧಾರದ ಮೇಲೆ ಮುಖ್ಯವಾಗಿ 2006-07ನೇ ಸಾಲಿನಲ್ಲಿ ಈ ಕೆಳಕಂಡಂತೆ ಸಂಚಾರ ಸುಧಾರಣಾ ಕಾರ್ಯಗಳನ್ನು ಹಮ್ಮಿಕೊಳ್ಳುವುದಾಗಿ ತಿಳಿಸುತ್ತಾ, ಈ ಯೋಜನೆಯ ಸ್ವರೂಪ, ಧ್ಯೇಯಗಳು, ನಿರ್ದಿಷ್ಟ ಅಂಶಗಳು ಹಾಗೂ ಕ್ರಿಯಾಯೋಜನೆಯ ವಿವರಗಳನ್ನು ನೀಡಿರುತ್ತಾರೆ.

| | | |
|---|---|---|
| | | (ಕೋಟಿ ರೂ.ಗಳಲ್ಲಿ) |
| 1. ಜಂಕ್ಷನ್ ಅಭಿವೃದ್ಧಿಗಳು | | – ರೂ. 2.00 |
| 2. ರಸ್ತೆ ಸೌಲಭ್ಯ ಸೌಕರ್ಯಗಳು ಹಾಗೂ ರಸ್ತೆಗೆ ಬಣ್ಣ ಬಳಿಯುವುದು | | – ರೂ. 5.00 |
| 3. ಎ.ಟಿ.ಸಿ. ವಿ.ಎಂ.ಎಸ್. ಇತ್ಯಾದಿಗಳನ್ನೊಳಗೊಂಡಂತೆ 250 ಇಂಟರ್ ಸೆಕ್ಷನ್‌ಗಳಲ್ಲಿ ಇಂಟಲಿಜೆಂಟ್ ಟ್ರಾನ್ಸ್‌ಪೋರ್ಟ್ ಸಿಸ್ಟಂ | | – ರೂ.30.00 |
| 4. ಎನ್‌ಫೋರ್ಸ್‌ಮೆಂಟ್ ಕ್ಯಾಮೆರಾಗಳು/ನಿಗಾ ಮತ್ತು ನಿರ್ವಹಣೆ ಇತ್ಯಾದಿ | | – ರೂ. 5.00 |
| 5. ಶಿಕ್ಷಣ ಮತ್ತು ತರಬೇತಿ ಮತ್ತಿತರೆ | | – ರೂ. 2.00 |
| | ಒಟ್ಟು | = ರೂ.44.00 |

**ಯೋಜನೆ:**

1. ಬಿ-ಟ್ರ್ಯಾಕ್-2010 ಯೋಜನೆಯ ಧ್ಯೇಯಗಳು ಎರಡು ತರಹದ್ದಾಗಿದ್ದು

**ಎ) ಕ್ರಿಯಾತ್ಮಕ ಧ್ಯೇಯಗಳು:**

ಅ) ಬೆಂಗಳೂರು ನಗರದ ಕೇಂದ್ರ ಪ್ರದೇಶದಲ್ಲಿ ಶೇಖಡ 30ರಷ್ಟು ಸಂಚಾರ ದಟ್ಟಣೆಯನ್ನು ಕಡಿಮೆ ಮಾಡುವುದು.

ಆ) ಬೆಂಗಳೂರು ನಗರದಲ್ಲಿ ಅಪಘಾತಗಳನ್ನು ಶೇಖಡ 30ರಷ್ಟು ಕಡಿಮೆ ಮಾಡುವುದು.

ಇ) ಮಾಲಿನ್ಯ ನಿಯಂತ್ರಣದಲ್ಲಿ ಗಮನಾರ್ಹ ಸಾಧನೆಗಯ್ಯುವುದು.

ಈ) ಸಂಚಾರ ನೀತಿ ನಿಯಮಗಳನ್ನು ಪಾಲಿಸುವುದರಲ್ಲಿ ಗಮನಾರ್ಹ ಸಾಧನೆಗಯ್ಯುವುದು.

ಉ) ಪರಿಣಾಮಕಾರಿ ಅಪಘಾತ ತುರ್ತು ಚಿಕಿತ್ಸಾ ಘಟಕದ ಸ್ಥಾಪನೆ.

**ಬಿ) ಸಾಂಸ್ಥಿಕ ಧ್ಯೇಯಗಳು:**

ಅ) ಟ್ರಾಫಿಕ್ ಟಾಸ್ಕ್ ಫೋರ್ಸ್, ರಸ್ತೆ ಸುರಕ್ಷತಾ ಸಮಿತಿ, ಸಂಚಾರ ಕ್ರಿಯಾ ಸಮಿತಿ ಮುಂತಾದವುಗಳನ್ನು ಸಾಂಸ್ಥೀಕರಣಗೊಳಿಸಿ ಅಭಿವೃದ್ಧಿಗೊಳಿಸುವ ತಂತ್ರಾಂಶಗಳಿಂದ, ಸಹಕಾರಿ ಸಂಚಾರ ಸುಧಾರಣೆ.

ಆ) ಶಕ್ತಿಶಾಲಿ ಆದಾಯ ವ್ಯವಸ್ಥೆ (ಸಂಚಾರ ನಿರ್ವಹಣೆ ಮುಂತಾದ ಸೌಕರ್ಯ ಹಾಗೂ ನಿರ್ವಹಣೆಗಾಗಿ ಹಣ ನೀಡಲು ಸಂಚಾರ ನಿಧಿ ಸ್ಥಾಪನೆ)

**ಸಿ) ಕಾನೂನು ಮತ್ತು ಸಾಂಸ್ಥಿಕ ಸುಧಾರಣೆ**

ಅ) ಸಾಮರ್ಥ್ಯ ನಿರ್ಮಾಣ, (ಸಂಚಾರ ತರಬೇತಿ ಶಾಲೆಯ ಆಧುನೀಕರಣ ಮತ್ತು ಉನ್ನತೀಕರಣ).

ಆ) ಅಧಿಕಾರಿಗಳು ಮತ್ತು ಸಿಬ್ಬಂದಿ ನೇಮಕಾತಿ ಮುಖಾಂತರ ಸಂಚಾರ ಪೊಲೀಸ್‌ನ ಬಲ ಪಡಿಸುವಿಕೆ, ಕಟ್ಟಡಗಳ ನಿರ್ಮಾಣ ಮತ್ತು ಆಧುನಿಕ ಸಂಪರ್ಕ ಜಾಲವನ್ನು, ಸಂಚಾರ ವ್ಯವಸ್ಥೆಗಳನ್ನು ಒದಗಿಸುವುದು.

2. ಬೆಂಗಳೂರು ನಗರಕ್ಕೆ, ಕೇವಲ ಸರಬರಾಜು ಮಾಡುವ ಅಂಶಗಳಷ್ಟೇ ಅಲ್ಲದೇ ಅಗತ್ಯತೆಗಳ ಕಡೆ ಗಮನಿಸುವಂತಹ ಸಂಚಾರ ನಿರ್ವಹಣಾ ವ್ಯವಸ್ಥೆಯ ಅಗತ್ಯವಿದೆ. ಬಿ-ಟ್ರ್ಯಾಕ್-2010 ಇದೇ ಮಾರ್ಗವನ್ನು ಅಳವಡಿಸಿಕೊಂಡಿದೆ.

3. ಆದ್ದರಿಂದ ಬಿ-ಟ್ರ್ಯಾಕ್-2010ರ ಚೌಕಟ್ಟಿನಲ್ಲಿ ಒಳಗೊಂಡಿರುವುದೇನೆಂದರೆ:

(ಅ) ಭೂ ಬಳಕೆ ಅಭಿವೃದ್ದಿ ನಿಯಂತ್ರಣಗಳು.

(ಆ) ಸಾರ್ವಜನಿಕ ಸಾರಿಗೆಗೆ ಪ್ರಾಧಾನ್ಯತೆ.

(ಇ) ನಿಲುಗಡೆ ನಿಯಂತ್ರಣಗಳು ಹಾಗೂ ನಿರ್ವಹಣೆ.

(ಈ) ಗಣಕೀಕೃತ ನಿಯಂತ್ರಣ ಹಾಗೂ ಜಾರಿ (ಐಟಿಎಸ್/ಎಟಿಸಿ)

(ಉ) ಕೇಂದ್ರ ಪ್ರದೇಶಕ್ಕೆ ಪ್ರವೇಶ ನಿರ್ಬಂಧಗಳು ಹಾಗೂ

(ಊ) ಅಪಘಾತಗಳನ್ನು ತಡೆಗಟ್ಟಲು ರಸ್ತೆ ಸುರಕ್ಷತಾ ಯೋಜನೆ.

4. **ಯೋಜನೆಯ ನಿರ್ದಿಷ್ಟ ವಿಷಯಾಂಶಗಳೆಂದರೆ:**

(ಅ) ಕೇಂದ್ರ ಪ್ರದೇಶದಲ್ಲಿನ ಪ್ರದೇಶ ಸಂಚಾರ ನಿಯಂತ್ರಣಾ ವ್ಯವಸ್ಥೆ(ಎಟಿಸಿ) ಸಂಚಾರ ವ್ಯವಸ್ಥೆಗಳು, ಖಡ್ಡಾಯ ಬಸ್"ಬೇ"ಗಳು ಹಾಗೂ ಬಸ್‌ಗಳಿಗೆ ಸಂಚಾರ ಸೂಚನಾ ದೀಪಗಳ ಬಳಿ ಪ್ರಾಮುಖ್ಯತೆ, ನಿಲುಗಡೆ ನಿಯಂತ್ರಣಗಳು, ಆಟೋರಿಕ್ಷಾ ರಹಿತ ವಲಯಗಳ ಸೃಷ್ಟಿ, ಕೇಂದ್ರ ಭಾಗಕ್ಕೆ ನಿರ್ಬಂಧಿತ ಸಂಚಾರ ಪ್ರವೇಶ.

(ಆ) ಅನಿರ್ಬಾಧಿತ ಸಂಚಾರದ ಹರಿವಿಗಾಗಿ, ಕೇಂದ್ರ ವರ್ತುಲ ರಸ್ತೆಯ ಅಭಿವೃದ್ಧಿ, ಇದರಿಂದಾಗಿ ಕೇಂದ್ರ ಪ್ರದೇಶದಿಂದ ಅನಾವಶ್ಯಕ ಸಂಚಾರವನ್ನು ಹೊರತುಪಡಿಸುವಿಕೆ.

(ಇ) ಹಲವಾರು ತ್ರಿಜ್ಯ ರಸ್ತೆಗಳಿಗೆ (ರೇಡಿಯಲ್ ರೋಡ್ಸ್) ವಲಯ ಸಂಚಾರ ನಿಯಂತ್ರಣ ವ್ಯವಸ್ಥೆ (ಎಟಿಸಿ ಮಾದರಿಯಲ್ಲಿ)

(ಈ) ಮಧ್ಯಂತರ ಹಾಗೂ ಹೊರ ವರ್ತುಲ ರಸ್ತೆಯ ಉನ್ನತೀಕರಣ ಮತ್ತು ಪರಿಧಿ-ವರ್ತುಲ ರಸ್ತೆ ಅಭಿವೃದ್ದಿ.

(ಉ) ಸುಧಾರಿತ ಸಂಪರ್ಕ ಜಾಲದೊಂದಿಗೆ ಸಂಚಾರ ಪೊಲೀಸ್‌ನ ಆಧುನೀಕರಣ, ಗಣಕೀಕರಣ, ಸಾರಿಗೆ ವ್ಯವಸ್ಥೆ, ಸಾಮರ್ಥ್ಯ ನಿರ್ಮಾಣ ಹಾಗೂ ಗಣಕೀಕೃತ ಜಾರಿ ಕ್ರಮಗಳ ವ್ಯವಸ್ಥೆ.

(ಮೇಲಿನ 3 ಮತ್ತು 4ರಲ್ಲಿನ ಕಾರ್ಯಜಾರಿ ಅಂಶಗಳ ವಿವರಗಳು ಮತ್ತು ಸಾಧನಾ ಸೂಚಕಗಳು ಅನುಬಂಧ-1 ಮತ್ತು 2ರ ಪ್ರಕಾರ ಇರುತ್ತವೆ)

5. 2006-07ರಿಂದ ಆರಂಭಿಸಿ ಮುಂಬರುವ ವರ್ಷಗಳಲ್ಲಿ ಕೈಗೊಳ್ಳಲಿರುವ ವಿವಿಧ ಚಟುವಟಿಕೆಗಳ ಅಂದಾಜು ವೆಚ್ಚಗಳ ವಿವರಗಳು ಈ ಕೆಳಕಂಡ ಕೋಷ್ಟಕದ ಪ್ರಕಾರ ಇರುತ್ತವೆ.

(ಕೋಟಿ ರೂ.ಗಳಲ್ಲಿ)

| ವಸ್ತು ವಿಷಯಗಳು | 2006–07 ವೆಚ್ಚ | 2007–08 ವೆಚ್ಚ | 2008–09 ವೆಚ್ಚ | 2009–10 ವೆಚ್ಚ | 2010–11 ವೆಚ್ಚ | ಮೊತ್ತ |
|---|---|---|---|---|---|---|
| ಜಂಕ್ಷನ್ ಅಭಿವೃದ್ಧಿಗಳು | 2.00 | 7.00 | 7.00 | 7.00 | 7.00 | 30.00 |
| ರಸ್ತೆ ಸೌಲಭ್ಯ ಸೌಕರ್ಯಗಳು ಹಾಗೂ ರಸ್ತೆ ಬಣ್ಣ ಬಳಿಯುವುದು | 5.00 | 23.75 | 23.75 | 23.75 | 23.75 | 100.00 |
| ಎಟಿಸಿ, ವಿಎಂಎಸ್ ಇತ್ಯಾದಿಗಳನ್ನೊಳಗೊಂಡಂತೆ 250 ಇಂಟರ್ ಸೆಕ್ಷನ್‌ಗಳಲ್ಲಿ ಇಂಟೆಲಿಜೆಂಟ್ ಟ್ರಾನ್ಸ್‌ಪೋರ್ಟ್ ಸಿಸ್ಟಂ | 30.00 | 30.00 | 30.00 | 30.00 | 30.00 | 150.00 |
| ಎನ್‌ಫೋರ್ಸ್‌ಮೆಂಟ್ ಕ್ಯಾಮೆರಾಗಳು/ನಿಗಾ ಮತ್ತು ನಿರ್ವಹಣೆ ಇತ್ಯಾದಿ | 5.00 | 11.25 | 11.25 | 11.25 | 11.25 | 50.00 |
| ಶಿಕ್ಷಣ ಮತ್ತು ತರಬೇತಿ ಮತ್ತಿತರೆ | 2.00 | 4.5 | 4.5 | 4.5 | 4.5 | 20.00 |
| **ಮೊತ್ತ** | **44.00** | **76.5** | **76.5** | **76.5** | **76.5** | **350.00** |

6. 2006–07ರ ಆರ್ಥಿಕ ವರ್ಷದಲ್ಲಿ ಬಿ–ಟ್ರ್ಯಾಕ್–2010 ಅನ್ನು ಜಾರಿಗೊಳಿಸಲು ಕ್ರಿಯಾ ಯೋಜನೆಯು ಕೆಳಕಂಡಂತಿರುತ್ತದೆ.

1) 10 ಪ್ರಮುಖ ವಲಯಗಳ (ಸಿಗ್ನಲ್‌ಗಳ) ಕ್ರೋಢೀಕರಣ (ಏಕೀಕರಣ), ವಾಹನೋತ್ತೇಜಿತ ಸಿಗ್ನಲ್‌ಗಳನ್ನು ಅಳವಡಿಸುವುದರ ಮುಖಾಂತರ ಚುರುಕಾದ ಇಂಟೆಲಿಜೆಂಟ್ ಟ್ರಾಫಿಕ್ ಸಿಗ್ನಲ್ ವ್ಯವಸ್ಥೆಯನ್ನು ಅಳವಡಿಸುವುದು, ಮೆಟಾಲಿಕ್‌ನಿಂದ ಪಾಲಿಕಾರ್ಬೋನೇಟ್ ಸಿಗ್ನಲ್‌ಗೆ ಹಾಗೂ ಇನ್‌ಕ್ಯಾಂಡೆಸೆಂಟ್ ಬಲ್ಬ್‌ನಿಂದ ಎಲ್‌ಇಡಿ ಬಲ್ಬ್‌ಗಳಿಗೆ ದುರಸ್ತಿ ಅಥವಾ ನವೀಕರಣಗೊಳಿಸುವುದನ್ನೊಳಗೊಂಡಂತೆ ಹಾಲಿ ಈಗಿರುವ 165 ಸಂಚಾರ ಸಿಗ್ನಲ್‌ಗಳ ಉನ್ನತೀಕರಣ/ಆಧುನೀಕರಣ ಗೊಳಿಸುವುದು.

2) ಸಮಗ್ರ ಕೇಂದ್ರ ಪ್ರದೇಶ ಹಾಗೂ ಪ್ರಮುಖ ವಲಯ ಪ್ರದೇಶಗಳಲ್ಲಿ ಸಿಗ್ನಲ್‌ಗಳ ಸಮಯ ಹಾಗೂ ಬಸ್ ಸಂಚಾರದ ಪ್ರಾಧಾನ್ಯತೆ ಇವುಗಳಿಗಾಗಿ ಅತ್ಯಾಧುನಿಕ ಏರಿಯಾ ಟ್ರಾಫಿಕ್ ಕಂಟ್ರೋಲ್ (ಎ.ಟಿ.ಸಿ_ ಸಂಪರ್ಕಜಾಲ) ರೂಪಿಸುವ ಬಗ್ಗೆ ವಿವರವಾದ ಯೋಜನೆಯನ್ನು ತಯಾರಿಸುವುದು.

3) ಕೇಂದ್ರ ನಿಯಂತ್ರಣ ಕೋಣೆಯೊಂದಿಗೆ ನಿಸ್ತಂತು ಸಂಪರ್ಕ ಹಾಗೂ ಸಾಫ್ಟ್‌ವೇರ್ ವ್ಯವಸ್ಥೆಯಿರುವ ಉನ್ನತ ಗುಣಮಟ್ಟದ ಟಿ.ಪಿ.ಜಡ್ ಕ್ಯಾಮೆರಾಗಳನ್ನು 50 ಜಂಕ್ಷನ್‌ಗಳಲ್ಲಿ ಅಳವಡಿಸುವುದರ ಮೂಲಕ ಸಂಚಾರದ ಹರಿವಿನ ನೇರ ವಿಡಿಯೋ ಪ್ರದರ್ಶನದ ವ್ಯವಸ್ಥೆಯಿಂದಾಗಿ ಸಂಚಾರವನ್ನು ಗುಣಾತ್ಮಕವಾಗಿ ಸುಗಮಗೊಳಿಸುವುದು.

4) 50 ಎಲ್.ಇ.ಡಿ ವೇರಿಯಬಲ್ ಮೆಸೇಜ್ ಸಿಸ್ಟಂ (ಫಲಕಗಳು) ಅನ್ನು ಸ್ಥಾಪಿಸಿ ಸಂಚಾರ ಪರಿಸ್ಥಿತಿಯ ಬಗ್ಗೆ, ಸ್ಥಗಿತಗಳ ಬಗ್ಗೆ, ಮಾರ್ಗ ಬದಲಾವಣೆ ಬಗ್ಗೆ ಸಂಚಾರ ನಿರ್ವಹಣಾ ಕೇಂದ್ರದೊಂದಿಗೆ ಅಂತರ್‌ಸಂಪರ್ಕ ಹೊಂದಿರುವ ವ್ಯವಸ್ಥೆಯಿಂದಾಗಿ ಸಾರ್ವಜನಿಕರಿಗೆ ಪೋಲೀಸರಿಂದ ಅಂತಹ ಮಾಹಿತಿಯನ್ನು ವಿ.ಎಂ.ಎಸ್ ಮೂಲಕ ಒದಗಿಸುವುದು ಹಾಗೂ ಎಚ್ಚರಿಸುವುದು.

5) ಸಂಚಾರ ಜಾಗೃತಿಗಾಗಿ (ಎಚ್ಚರಿಸಲು) ವಿ.ಎಂ.ಎಸ್ ಸಂಪರ್ಕ ಮತ್ತು ರೇಡಿಯೋ ಸ್ಟೇಷನ್‌ಗಳೊಂದಿಗೆ ಸಂಪರ್ಕವಿರುವ, ಸಂಚಾರ ನೆರವು ಮೇಜಿನ (ಟ್ರಾಫಿಕ್ ಹೆಲ್ಪ್ ಡೆಸ್ಕ್) ನಿಸ್ತಂತು ನಿಯಂತ್ರಣ ಕೋಣೆಯಲ್ಲಿ ಸಿಗ್ನಲ್‌ಗಳ ಸ್ಥಿತಿಗತಿಗಳನ್ನು ಬಿಂಬಿಸುವ ವಿಡಿಯೋ ಚಿತ್ರವನ್ನು ತೋರಿಸುವಂತಹ ಬೃಹತ್ ವಿಡಿಯೋ ಗೋಡೆಗಳನ್ನು ಹೊಂದಿರುವ ಅತ್ಯಾಧುನಿಕ ಟ್ರಾಫಿಕ್ ಮ್ಯಾನೇಜ್‌ಮೆಂಟ್ ಕೇಂದ್ರ (ಟಿ.ಎಂ.ಸಿ) ವನ್ನು ಸ್ಥಾಪಿಸುವುದು.

6) ಸ್ವಯಂಚಾಲಿತ ಸಂಚಾರ ನಿಯಮಜಾರಿ ಕ್ಯಾಮೆರಾಗಳನ್ನು ಅಳವಡಿಸುವುದರ ಮೂಲಕ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಗಣಕೀಕೃತ ಕೇಂದ್ರದ ಮುಖಾಂತರ, ಕೆಂಪು–ಸಿಗ್ನಲ್ ಜಂಪ್ ನಂತಹ ಉಲ್ಲಂಘನೆಗಳು, ವಾಹನಗಳನ್ನು ಅತಿ ವೇಗದಿಂದ ಚಲಾಯಿಸುವಂತಹ ಉಲ್ಲಂಘನೆಗಳ ಬಗ್ಗೆ ಸ್ವಯಂಚಾಲಿತವಾಗಿ ಚಲನ್ನುಗಳನ್ನು ಹೊರಡಿಸುವುದು.

7) ಸಂಚಾರ ಸೂಚನೆಗಳನ್ನು ನೀಡುವುದರ ಸಲುವಾಗಿ ಆಧುನಿಕ ಸಂಚಾರ ಫಲಕಗಳು, ಪೋಲೀಸ್ ಬ್ಯಾರಿಕೇಡ್‌ಗಳು, ಪಥವಿಭಜನೆಗಾಗಿ ಟ್ಯೂಬುಲರ್ ಕೋನ್ಸ್‌ಗಳು, ದಿಕ್ಸೂಚಿ ಫಲಕಗಳು/ ಬೃಹತ್ ಗ್ಯಾಂಟ್ರಿಗಳನ್ನು ಸ್ಥಾಪಿಸುವುದು.

8) ಪ್ರಧಾನ ಸಂಪರ್ಕ ರಸ್ತೆಗಳಲ್ಲಿ ಥರ್ಮೋ ಪ್ಲಾಸ್ಟಿಕ್ ಬಣ್ಣದಿಂದ ರಸ್ತೆಗಳಿಗೆ ಬಣ್ಣ ಬಳಿಯುವುದು.

9) ಸಂಚಾರ ಪೋಲೀಸರು ಮತ್ತಿತರರ ತರಬೇತಿಗಾಗಿ ಅತ್ಯಾಧುನಿಕ ಸಂಚಾರ ತರಬೇತಿ ಶಾಲೆಯನ್ನು ಅಭಿವೃದ್ಧಿಗೊಳಿಸಲು ಯೋಜನೆಯನ್ನು ರೂಪಿಸುವುದು.

10) ಗಸ್ತು ವಾಹನಗಳನ್ನು ಒದಗಿಸುವುದು, ಟೋಯಿಂಗ್ ವಾಹನಗಳನ್ನು ಒದಗಿಸುವುದು ಮತ್ತು ಇಂಟರ್‌ಸೆಪ್ಟರ್ಸ್ ಮುಖಾಂತರ ಸಂಚಾರ ಪೋಲೀಸರ ಓಡಾಟದ ಗುಣಮಟ್ಟವನ್ನು ಹೆಚ್ಚಿಸುವುದು.

11) ಸ್ವರಕ್ಷಣೆಯ ಉಪಕರಣಗಳನ್ನು ಪೊಲೀಸ್ ಕಾನ್ಸ್‌ಟೇಬಲ್‌ಗಳಿಗೆ ಒದಗಿಸುವುದು, ಸಂಚಾರ ಪೊಲೀಸ್‌ನ ಗಣಕೀಕೃತ ವ್ಯವಸ್ಥೆಯನ್ನು ಉತ್ತಮಪಡಿಸುವುದು ಹಾಗೂ ಸಂಚಾರ ಪೊಲೀಸ್ ವ್ಯವಸ್ಥೆಗೆ ಆಧುನಿಕ ಉಪಕರಣಗಳನ್ನು ಒದಗಿಸುವುದು.

12) ಬಾಕಿ ಇರುವ 4 ವರ್ಷಗಳ ಅವಧಿಗೆ ವಿವರವಾದ ಯೋಜನೆಯನ್ನು (ಡಿ.ಪಿ.ಆರ್) ತಯಾರಿಸುವುದು.

13) ಕೇಂದ್ರ ಪ್ರದೇಶದ ಅಭಿವೃದ್ಧಿ ಯೋಜನೆ, ಸ್ಥಳೀಯ ಪ್ರದೇಶಗಳ ಅಭಿವೃದ್ಧಿ ಯೋಜನೆ ಹಾಗೂ ಅಪಘಾತ ತಗ್ಗಿಸುವ ಯೋಜನೆ ಮುಂತಾದ ಸಂಚಾರ ನಿರ್ವಹಣಾ ಯೋಜನೆಗಳನ್ನು ತಯಾರಿಸಿ ಕಾರ್ಯಗತಗೊಳಿಸುವುದು.

ಈ ಯೋಜನೆಯ ಪ್ರಸ್ತುತ ವರ್ಷ (2006-07) ಮತ್ತು ಮುಂಬರುವ ವರ್ಷಗಳಲ್ಲಿ ಕೈಗೊಳ್ಳಬೇಕಾಗಿರುವ ಚಟುವಟಿಕೆಗಳ ಅಂದಾಜು ವೆಚ್ಚಗಳ ವಿವರಗಳನ್ನು ಮೇಲಿನ ಕಂಡಿಕೆ-5ರಲ್ಲಿ ವಿವರಿಸಲಾಗಿದೆ. ಈ ವಿವರಗಳ ಪ್ರಕಾರ ಉಪಯೋಗಿಸಲು ಉದ್ದೇಶಿಸಿರುವ 2007-08ರಿಂದ 4 ವರ್ಷಗಳ ಅವಧಿಗೆ ಪ್ರತಿವರ್ಷ ರೂ.76.5 ಕೋಟಿಯಂತೆ ಉಳಿದ ರೂ.306.00 ಕೋಟಿ ಹಣದ ಅವಶ್ಯಕತೆ ಇದ್ದು, ಇದರಲ್ಲಿ ಜೆ.ಎನ್.ಯು.ಆರ್.ಎಂ. ನಿಯಮಗಳನುಸಾರ ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರಗಳ ಕೊಡುಗೆಯು ಕ್ರಮವಾಗಿ ಶೇಖಡ 35 ಹಾಗೂ ಶೇಖಡ 15 ಆಗಿದ್ದು ಉಳಿದ ಶೇಖಡ 50 ಭಾಗವನ್ನು ಸ್ಥಳೀಯ ಸಂಸ್ಥೆಗಳಿಂದ ಸಾಲ ಮುಂತಾದವುಗಳ ಮುಖಾಂತರ ಹೊಂದಿಸಿಕೊಳ್ಳಬೇಕಾಗುತ್ತದೆಂದು, ಬಿ-ಟ್ರಾಕ್-2010 ಯೋಜನೆಯನ್ನು ಕೇಂದ್ರ ಸರ್ಕಾರ ಸಂಪೂರ್ಣವಾಗಿ ಒಪ್ಪಿಕೊಳ್ಳಬಹುದು ಎಂಬ ಭರವಸೆಯ ಮೇಲೆ ಕೇಂದ್ರ ಸರ್ಕಾರದಿಂದ ರೂ.107.00 ಕೋಟಿ ನಿರೀಕ್ಷೆ ಇಟ್ಟುಕೊಳ್ಳಬಹುದಾಗಿದ್ದು, ರೂ.45.00 ಕೋಟಿಯನ್ನು ರಾಜ್ಯ ಸರ್ಕಾರವೇ ನೀಡಬೇಕಾಗಿರುತ್ತದೆಂದು, 2005ನೇ ಸಾಲಿನಲ್ಲಿ ಸಂಗ್ರಹವಾಗಿರುವ ಸಂಚಾರ ದಂಡದ ಮೊತ್ತ ರೂ.17.75 ಕೋಟಿಯನ್ನು ಆಧರಿಸುತ್ತಾ ಇದು ಪ್ರತಿ ವರ್ಷ ರೂ.20.00 ಕೋಟಿಗೆ ಹೆಚ್ಚಳವಾಗುವ ಸಂಭವವಿರುತ್ತದೆಂದು, ಇದರಿಂದಾಗಿ ಇಲಾಖೆಯು ಸಂಗ್ರಹಿಸಬೇಕಾಗಿರುವ ಶೇಖಡ 50ರಷ್ಟು ನಿಧಿಯ ಮೂಲದ ಕಡೆಗೆ ರೂ.80.00 ಕೋಟಿ ಲಭ್ಯವಾಗಲಿದೆಯೆಂದು, ಉಳಿದ ರೂ.73.00 ಕೋಟಿ ಹಣವನ್ನು ಪಿಪಿಪಿ (ಪಬ್ಲಿಕ್ ಪ್ರೈವೇಟ್ ಪಾರ್ಟನರ್‌ಶಿಪ್) ಮೂಲಗಳಿಂದ, ಹಾಗೂ ಇತರೇ ಪಾಲುದಾರ ಸಂಸ್ಥೆಗಳಾದ ಬಿ.ಎಂ.ಟಿ.ಸಿ, ಬಿ.ಡಿ.ಎ, ಬಿ.ಡಬ್ಲ್ಯೂ.ಎಸ್.ಎಸ್.ಬಿ ಮುಂತಾದವುಗಳಿಂದ ಸಂಗ್ರಹಿಸ ಬೇಕಾಗಿರುತ್ತದೆಂದು ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ತಿಳಿಸಿರುತ್ತಾರೆ.

ಯೋಜನೆಯ ಉಳಿದ ವರ್ಷಗಳು ಅಂದರೆ 2007-08ರಿಂದ 2010-11ರ ಅವಧಿಗೆ ವಿವರವಾದ ಯೋಜನೆ ಹಾಗೂ ಕಾರ್ಯಕ್ರಮಗಳನ್ನು ಡಿ.ಪಿ.ಆರ್ (DPR) ರೂಪಿಸಲಿದೆ. ಪ್ರಸ್ತುತ ಸಾಲಿನಲ್ಲಿ ಜಾರಿಯಾಗಿರುವ ಕಾರ್ಯಕ್ರಮಗಳು ಹಾಗೂ ಲಭ್ಯವಿರುವ ಅಂಶಗಳ ಮೌಲ್ಯಮಾಪನ ಮಾಡಿದ ನಂತರ, ಮೇಲ್ಕಂಡ ಕಾರ್ಯಕ್ರಮಗಳನ್ನು ಆಧರಿಸುತ್ತ ಹಾಗೂ ನಿಧಿ ಸಂಗ್ರಹಣೆಯ ಸಂಚಯನವನ್ನು ಆಧರಿಸಿ ಮುಂಬರುವ 4 ವರ್ಷಗಳ ಅವಧಿಗೆ ಯೋಜನೆಯನ್ನು ಸಚಿವ ಸಂಪುಟದ ಒಪ್ಪಿಗೆಗಾಗಿ ಮಂಡಿಸಬೇಕಾಗುತ್ತದೆ. ವರ್ಷಾವಧಿಯ ಮಾಸಿಕ ಕಾರ್ಯಕ್ರಮಗಳ ಬಗ್ಗೆ (MMR) ಎಂ.ಎಂ.ಆರ್ ಸಭೆಯಲ್ಲಿ ನಿಗಾವಹಿಸಬೇಕಾಗಿರುತ್ತದೆಂದು ತಿಳಿಸಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ:73:ಪಿಒಪಿ:2006, ಬೆಂಗಳೂರು, ದಿನಾಂಕ: 6ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ನಗರ ಸಂಚಾರಿ ಸುಧಾರಣೆ ಬಿ-ಟ್ರಾಕ್-2010 ಯೋಜನೆಯನ್ನು 2006-07ರಿಂದ ಪ್ರಾರಂಭಿಸಿ 5 ವರ್ಷಗಳ ಅವಧಿಗೆ ಒಟ್ಟು ರೂ.350.00 ಕೋಟಿಗಳ (ಮೂರು ನೂರ ಐವತ್ತು ಕೋಟಿ ರೂಪಾಯಿಗಳು ಮಾತ್ರ) ಯೋಜನೆಗೆ ಆಡಳಿತಾತ್ಮಕ ಅನುಮೋದನೆ ಮತ್ತು 2006-07ನೇ ಸಾಲಿನಲ್ಲಿ ಪ್ರಸ್ತಾವನೆಯಲ್ಲಿ ವಿವರಿಸಿರುವ ಕ್ರಿಯಾ ಯೋಜನೆಯಂತೆ ಈ ಕೆಳಗಿನ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲು ರೂ.44.00 ಕೋಟಿಗಳಿಗೆ (ನಲವತ್ತ ನಾಲ್ಕು ಕೋಟಿ ರೂಪಾಯಿಗಳು ಮಾತ್ರ) ಸರ್ಕಾರವು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

| | | **(ಕೋಟಿ ರೂ.ಗಳಲ್ಲಿ)** |
|---|---|---|
| 1. ಜಂಕ್ಷನ್ ಅಭಿವೃದ್ಧಿಗಳು | - | ರೂ. 2.00 |
| 2. ರಸ್ತೆ ಸೌಲಭ್ಯ ಸೌಕರ್ಯಗಳು ಹಾಗೂ ರಸ್ತೆಗೆ ಬಣ್ಣ ಬಳಿಯುವುದು | - | ರೂ. 5.00 |
| 3. ಎ.ಟಿ.ಸಿ. ವಿ.ಎಂ.ಎಸ್. ಇತ್ಯಾದಿಗಳನ್ನೊಳಗೊಂಡಂತೆ 250 ಇಂಟರ್ ಸೆಕ್ಷನ್‌ಗಳಲ್ಲಿ ಇಂಟಲಿಜೆಂಟ್ ಟ್ರಾನ್ಸ್‌ಪೋರ್ಟ್ ಸಿಸ್ಟಂ | - | ರೂ.30.00 |
| 4. ಎನ್‌ಫೋರ್ಸ್‌ಮೆಂಟ್ ಕ್ಯಾಮೆರಾಗಳು/ನಿಗಾ ಮತ್ತು ನಿರ್ವಹಣೆ ಇತ್ಯಾದಿ | - | ರೂ. 5.00 |
| 5. ಶಿಕ್ಷಣ ಮತ್ತು ತರಬೇತಿ ಮತ್ತಿತರೆ | - | ರೂ. 2.00 |
| **ಒಟ್ಟು** | **=** | **ರೂ.44.00** |

ಈ ಮಂಜೂರಾತಿಯು ಪ್ರಸ್ತುತ ಸಾಲಿನಲ್ಲಿ ಜಾರಿಯಲ್ಲಿರುವ ಕಾರ್ಯಕ್ರಮಗಳ ಮೌಲ್ಯಮಾಪನದ ಆಧಾರದ ಮೇರೆಗೆ ಮುಂಬರುವ ವರ್ಷಗಳ ಕಾರ್ಯಕ್ರಮಗಳನ್ನು ಸಚಿವ ಸಂಪುಟದ ಮುಂದೆ ಮಂಡಿಸುವ ಷರತ್ತಿಗೊಳಪಟ್ಟಿದೆ.

ಪ್ರಸಕ್ತ ಸಾಲಿನ ಬಜೆಟ್ ಅನುದಾನದ ಮೊತ್ತ ರೂ.44.00 ಕೋಟಿಯನ್ನು ಉಪಯೋಗಿಸಿಕೊಂಡು 2006-07ರ ಸಾಲಿನಿಂದ ಯೋಜನೆಯನ್ನು ಕಾರ್ಯಗತಗೊಳಿಸುವಂತೆ ಹಾಗೂ 2007-08ನೇ ಸಾಲಿಗೆ ಮತ್ತು ಮುಂಬರುವ ವರ್ಷಗಳಿಗೆ ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ಈ ಯೋಜನೆಯ ನಿಧಿಗಾಗಿ ಸಂಚಾರ ದಂಡದ ಮೊತ್ತದ ಬಳಕೆ, ಇತರೆ ಮೂಲಗಳಾದ ಜಿ.ಎನ್.ಯು.ಆರ್.ಎಂ., ಪಿ.ಪಿ.ಪಿ ಹಾಗೂ ಪಾಲುದಾರರ ಸಂಸ್ಥೆಗಳಾದ ಬಿ.ಎಂ.ಟಿ.ಸಿ., ಬಿ.ಡಿ.ಎ., ಬಿ.ಡಬ್ಲ್ಯೂ.ಎಸ್.ಎಸ್.ಬಿ.,

ಮುಂತಾದವುಗಳಿಂದ ಸಂಗ್ರಹಿಸತಕ್ಕದ್ದು. ಮತ್ತು ಈ ಸಂಗ್ರಹಣೆಯ ನಂತರವೂ ಅಗತ್ಯವಿರುವಷ್ಟು ಪ್ರಮಾಣಕ್ಕೆ 2007–08 ಮತ್ತು ಮುಂದಿನ ಯೋಜನಾ ವರ್ಷಗಳಿಗೆ ಆಯವ್ಯಯದಲ್ಲಿ ಅನುದಾನ ಒದಗಿಸಿಕೊಳ್ಳತಕ್ಕದ್ದು.

ಈ ವೆಚ್ಚವನ್ನು 2006–07ನೇ ಸಾಲಿನ ಲೆಕ್ಕ ಶೀರ್ಷಿಕೆ 2055–00–108–0–09–059 (ಯೋಜನೆ)– ಇದರ ಅಡಿಯಲ್ಲಿ ಒದಗಿಸಲಾದ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ:ಪಿಡಿ:88:ಡಿಪಿಡಿ:2006 ದಿನಾಂಕ:25/09/2006ರ ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ:1343:ವೆಚ್ಚ–6:2006 ದಿನಾಂಕ:08/11/2006ರ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ವೆಚ್ಚ)

**ಸರ್ಕಾರಿ ಆದೇಶ ಸಂಖ್ಯೆ:ಹೆಚ್‌ಡಿ:73:ಪಿಒಪಿ:2006 ದಿನಾಂಕ:06/01/2007**

**ಅನುಬಂಧ–1**

| | ಮಾನ ದಂಡಗಳು | | ಸಾಧನಾ ಸೂಚಕಗಳು |
|---|---|---|---|
| 1 | ಅ)ಭೂ ಬಳಕೆ ಅಭಿವೃದ್ಧಿ ನಿಯಂತ್ರಣಗಳು: | | ಉದ್ದೇಶಿತ ಸಮಗ್ರ ಅಭಿವೃದ್ಧಿ ಯೋಜನೆಯಲ್ಲಿನಂತೆ ಕಾರ್ಯಗತಗೊಳಿಸಲಾಗುವುದು |
| 2 | ಆ) ಸಾರ್ವಜನಿಕ ಸಾರಿಗೆಗೆ ಪ್ರಾಧಾನ್ಯತೆ:<br>(i) ಉಪಗ್ರಹ ಬಸ್ ನಿಲ್ದಾಣಗಳ ನಿರ್ಮಾಣ<br><br>(ii) ನಿಗದಿತ ಕಡ್ಡಾಯ ಬಸ್ ಪಥಗಳ ಹಾಗೂ ರಸ್ತೆಗಳು ಕೂಡುವ ಸ್ಥಳಗಳಲ್ಲಿ ಬಸ್‌ಗಳಿಗೆ ಪ್ರಾಧಾನ್ಯತೆ | | ಎಲ್ಲಾ ವರ್ತುಲ ಹೆದ್ದಾರಿಗಳಲ್ಲಿನ ಪ್ರವೇಶ ಸ್ಥಳಗಳಲ್ಲಿ ಉಪಗ್ರಹ ಬಸ್ ನಿಲ್ದಾಣಗಳನ್ನು ನಿರ್ಮಿಸಲು ಕೆ.ಎಸ್.ಆರ್.ಟಿ.ಸಿಯು ಭೂ ಸ್ವಾಧೀನ ಹಾಗೂ ಮಂಜೂರಾತಿಗಾಗಿ ಕಾಯುತ್ತಿದೆ. ಬಿ.ಡಿ.ಎ ಈ ಬಗ್ಗೆ ಕಾರ್ಯೋನ್ಮುಖವಾಗಿದೆ.<br><br>ಅ) ಬಸ್ ಪಥ ಮತ್ತಿತರೆ ಸಹಕಾರಯುತ ಮೂಲ ಸೌಕರ್ಯಗಳೊಂದಿಗೆ ತ್ವರಿತ ಬಸ್ ಸಂಚಾರ ವ್ಯವಸ್ಥೆಯನ್ನು ಹೊರ ವರ್ತುಲ ರಸ್ತೆಯಲ್ಲಿನ ಯಶಸ್ಸನ್ನು ಆಧರಿಸಿ ಹೆಚ್ಚು ರಸ್ತೆಗಳನ್ನು ಈ ಯೋಜನೆಗೆ ಆಯ್ಕೆ ಮಾಡಿಕೊಳ್ಳಲಾಗುವುದು.<br>ಆ) ಬೆಂಗಳೂರು ನಗರದ ಮಳೆ ನೀರು ಚರಂಡಿಗಳ ಮೇಲೆ ಆಕಾಶ ಮಾರ್ಗದ ಮೇಲ್ಸೇತುವೆ ರಸ್ತೆಯಲ್ಲಿನ ಬಸ್ ಮಾರ್ಗಗಳ ಬಗ್ಗೆ ಬಿ.ಎಂ.ಪಿ. ತೀವ್ರ ಕಾಳಜಿಯಿಂದ ಪರಿಶೀಲಿಸುತ್ತಿದೆ.<br>ಇ) ಆನ್‌ಲೈನ್ ಪ್ರಯಾಣಿಕರ ಮಾಹಿತಿ ವ್ಯವಸ್ಥೆಯನ್ನು ಆಧರಿಸಿ ಬಿ.ಎಂ.ಟಿ.ಸಿಯು (ಜಿ.ಐ.ಎಸ್/ಜಿ.ಪಿ.ಎಸ್) PIs / IVRs ಅನ್ನು ನಗರದ ಬಸ್ ನಿಲುಗಡೆಗಳಲ್ಲಿ ಕಾರ್ಯಗತಗೊಳಿಸುತ್ತದೆ. (ಪಿ.ಡಿ.ಎಸ್.ಪಿ.ವಿ.ಆರ್.ಎಸ್)<br>ಈ) ಬಿ–ಟ್ರಾಕ್–2010 ಯೋಜನೆಯ ಅಂಗವಾಗಿ ಏರಿಯಾ ಟ್ರಾಫಿಕ್ ಕಂಟ್ರೋಲ್/ಇಂಟೆಲಿಜೆಂಟ್ ಟ್ರಾನ್ಸ್‌ಪೋರ್ಟ್ ಸಿಸ್ಟಂನ ಅಂಗವಾಗಿ, ರಸ್ತೆ ಜಂಕ್ಷನ್‌ಗಳಲ್ಲಿ ಅತ್ಯಾಧುನಿಕ ಸೆನ್ಸಾರ್‌ಗಳ ಆಧಾರಿತ ಸಿಗ್ನಲ್ ವ್ಯವಸ್ಥೆಯಲ್ಲಿ ಬಸ್ಸುಗಳಿಗೆ ಪ್ರಾಧಾನ್ಯತೆಯನ್ನು ಖಾತ್ರಿಗೊಳಿಸಲಾಗುವುದು. |
| | (iii) ಬಸ್ ಬೇಗಳ ನಿರ್ಮಾಣ: | | ಬೆಂಗಳೂರು ಮಹಾನಗರ ಪಾಲಿಕೆಯು ಪ್ರಸ್ತುತ ಆರ್ಥಿಕ ವರ್ಷದ ಸಾಲಿನಲ್ಲಿ 50 ಬಸ್ ಬೇಗಳ ನಿರ್ಮಾಣ ಕಾರ್ಯವನ್ನು ಕೈಗೊಂಡಿದೆ. ಮುಂದಿನ ಆರ್ಥಿಕ ವರ್ಷದ ಸಾಲಿಗೆ ಮತ್ತಷ್ಟು ವಿವರವಾದ ಯೋಜನೆಯನ್ನು ಸಿದ್ಧಪಡಿಸಲಾಗುವುದು. |
| | ಇ) ನಿಲುಗಡೆ ನಿಯಂತ್ರಣ ಮತ್ತು ನಿರ್ವಹಣೆ<br>(i) ಪಾರ್ಕ್ ಅಂಡ್ ರೈಡ್<br>(ii) (ಕ್ಯಾರೇಜ್ ವೇ) ರಸ್ತೆಯ ಮೇಲೆ ವಾಹನಗಳ ನಿಲುಗಡೆ ನಿಷೇಧ | | ಪ್ರಸ್ತುತ ವರ್ಷದ ಸಾಲಿನಲ್ಲಿ ಬಿ.ಎಂ.ಟಿ.ಸಿಯು 10 ಸ್ಥಳಗಳಲ್ಲಿ ಪಾರ್ಕ್ ಅಂಡ್ ರೈಡ್ ಸೌಲಭ್ಯ ಕಲ್ಪಿಸುವ ಗುರಿ ಹೊಂದಿದೆ.<br><br>ಬೆಂಗಳೂರು ನಗರ ಸಂಚಾರ ಪೊಲೀಸರು ಪ್ರಧಾನ ರಸ್ತೆಗಳ ಜಾಲದಲ್ಲಿನ ಸಾಧ್ಯವಾದ ಎಲ್ಲಾ ಸ್ಥಳಗಳಲ್ಲಿ ರಸ್ತೆಯ ಮೇಲೆ (ಕ್ಯಾರೇಜ್‌ವೇ) ವಾಹನಗಳನ್ನು ನಿಲ್ಲಿಸುವುದನ್ನು ನಿಷೇಧಿಸಲು ಕ್ರಮ ಕೈಗೊಂಡಿದ್ದು ಪ್ರಸ್ತುತ ಆರ್ಥಿಕ ವರ್ಷದಲ್ಲಿ 50 ಸ್ಥಳಗಳಲ್ಲಿ ನಿಷೇಧಿಸುವ ಗುರಿ ಹೊಂದಿದೆ. |

| | ಮಾನ ದಂಡಗಳು | | ಸಾಧನಾ ಸೂಚಕಗಳು |
|---|---|---|---|
| | (iii) ಕಿರುವಾಹನಗಳ ನಿಲ್ದಾಣಗಳ ಅಭಿವೃದ್ಧಿ | | ಬಿ.ಎಂ.ಪಿಯು ಪೇ ಅಂಡ್ ಪಾರ್ಕ್ ವ್ಯವಸ್ಥೆಯನ್ನು ಪುನರ್ ಜಾರಿಗೊಳಿಸಲಿದೆ. 25 ಸ್ಥಳಗಳಲ್ಲಿ ಆಫ್ ಸ್ಟ್ರೀಟ್ ಮತ್ತು ಅಟ್ ಗ್ರೇಡ್ ವಾಹನಗಳ ನಿಲುಗಡೆ ವ್ಯವಸ್ಥೆಯನ್ನು ಜೊತೆಗೆ ಮತ್ತಷ್ಟು ಹಲವು ಅಂತಸ್ತುಗಳ ಕಾರ್ ನಿಲುಗಡೆ ವ್ಯವಸ್ಥೆಗೊಳಿಸಲು ಯೋಜಿಸಲಾಗಿದೆ. |
| | (iv) ವಾಹನಗಳ ನಿಲುಗಡೆ ಮಾಹಿತಿ ವ್ಯವಸ್ಥೆ: | | ಆನ್ ಸ್ಟ್ರೀಟ್ ಮತ್ತು ಆಫ್ ಸ್ಟ್ರೀಟ್ ನಿಲುಗಡೆಗೆ ಸೂಕ್ತವಾದ ಸ್ಥಳಗಳ ಆಧಾರದ ಮೇರೆಗೆ ಬಿ.ಎಂ.ಪಿಯು ಯೋಜನೆ ತಯಾರಿಸಬೇಕಾಗಿದೆ. |
| | (d) ಸ್ವಯಂಚಾಲಿತ ಗಣಕೀಕೃತ ನಿಯಂತ್ರಣ ಹಾಗೂ (ನಿಯಮಗಳ) ಜಾರಿ (ಐ.ಟಿ.ಎಸ್ /ಎ.ಟಿ.ಸಿ) | | ಪ್ರಸ್ತುತ ಆರ್ಥಿಕ ವರ್ಷದ ಯೋಜನೆಯಲ್ಲಿ ಹಾಲಿ ಈಗಿರುವ 165 ಸಿಗ್ನಲ್ ದೀಪಗಳನ್ನು ಚುರುಕು ಗೊಳಿಸಿ, ಅತ್ಯಾಧುನಿಕ ವಾಹನೋತ್ತೇಜಿತ ಕೇಂದ್ರೀಕೃತ ಸಂಪರ್ಕವಿರುವ ವ್ಯವಸ್ಥೆಯನ್ನಾಗಿ ಸಲು ಯೋಜಿಸಿದೆ. 50 ಕ್ಯಾಮೆರಾಗಳ ಅಳವಡಿಕೆ ವ್ಯವಸ್ಥೆ ಯಿಂದ ಸಂಚಾರ ನಿಗಾವಹಿಸುವ ವ್ಯವಸ್ಥೆ ರೂಪಿಸಲಾಗಿದೆ. ಗಣಕೀಕೃತ ನಿಯಂತ್ರಣ ಜಾರಿ ವ್ಯವಸ್ಥೆಯನ್ನು ಬಲಪಡಿಸುವುದು ಹಾಗೂ ಪ್ರಸ್ತುತ ವರ್ಷದಲ್ಲಿ 5 ಸ್ಥಳಗಳಲ್ಲಿ ಕೆಂಪು/ ಸ್ಪೀಡ್ ಕ್ಯಾಮೆರಾಗಳನ್ನು ಅಳವಡಿಸ ಲಾಗುವುದು. |
| | (e) ಕೇಂದ್ರ ಪ್ರದೇಶಕ್ಕೆ ನಿರ್ಬಂದಿತ ಪ್ರವೇಶ | | ವಿವರವಾದ ವರದಿಯನ್ನು ಆಧರಿಸಿ ತಂತ್ರಾಂಶ ಹಾಗೂ ಅದರ ಸಾಧ್ಯಾಸಾಧ್ಯತೆಗಳನ್ನು ಪರಿಶೀಲಿಸಿ ಯೋಜಿಸಲಾಗುವುದು. |
| | (f) ಅಪಘಾತ ತಗ್ಗಿಸಲು ರಸ್ತೆ ಸುರಕ್ಷತಾ ಯೋಜನೆ: | | ಒಟ್ಟಾರೆ ಮತ್ತು ಅಪಘಾತಗಳ ಅಂಶಗಳ ಸಮಗ್ರ ಅಧ್ಯಯನದ ಆಧಾರದ ಮೇಲೆ ವಿವರವಾದ ರಸ್ತೆ ಸುರಕ್ಷತಾ ಯೋಜನೆಯನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪೂರ್ಣವಾಗಿ ಸಿದ್ಧಪಡಿಸಿ, ಗಣನೀಯ ಪ್ರಮಾಣದಲ್ಲಿ ಅಪಘಾತಗಳನ್ನು ತಗ್ಗಿಸುವ ಗುರಿಯೊಂದಿಗೆ ಮುಂಬರುವ ವರ್ಷದಲ್ಲಿ ಕಾರ್ಯಗತ ಗೊಳಿಸಲಾಗುವುದು. |

**ಕೆ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೋಲೀಸ್ ವೆಚ್ಚ)

**ಸರ್ಕಾರಿ ಆದೇಶ ಸಂಖ್ಯೆ:ಹೆಚ್‌ಡಿ:73:ಪಿಒಪಿ:2006 ದಿನಾಂಕ:06/01/2007**

**ಅನುಬಂಧ-2**

| | ಕಾರ್ಯಕ್ರಮಗಳು | | ಸಾಧನಾ ಸೂಚಕಗಳು |
|---|---|---|---|
| 1. | a) ಕೇಂದ್ರ ಪ್ರದೇಶದ ಏರಿಯಾ ಟ್ರಾಫಿಕ್ ಕಂಟ್ರೋಲ್ ಸಿಸ್ಟಂ | | ಅನುಬಂಧ-1ರಲ್ಲಿ ಸೂಚಿಸಿದಂತೆ |
| | b) ಏಕ ಮುಖ ಸಂಚಾರ ವ್ಯವಸ್ಥೆಗಳು | | ಕೇಂದ್ರ ಪ್ರದೇಶದಲ್ಲಿ ಬಹಳಷ್ಟು ಸಂಖ್ಯೆಯಲ್ಲಿ ಏಕಮುಖ ಸಂಚಾರ ವ್ಯವಸ್ಥೆಯನ್ನು ಈಗಾಗಲೇ ಜಾರಿಗೊಳಿಸಲಾಗಿದೆ. ಪ್ರಸ್ತುತ ವರ್ಷದಲ್ಲಿ ಇವುಗಳ ಪುನರಾವ ಲೋಕನೆ ಮಾಡಿ ಬದಲಾವಣೆ ಬಗ್ಗೆಯ ಅಧ್ಯಯನದಲ್ಲಿ ಸಲಹೆ ಸೂಚನೆಗಳು ಇದ್ದಲ್ಲಿ ಜಾರಿ ಗೊಳಿಸಲಾಗುವುದು |
| | c) ನಿಲುಗಡೆ ನಿಯಂತ್ರಣಗಳು | | ಅನುಬಂಧ-1ರಲ್ಲಿ ಸೂಚಿಸಿದಂತೆ |
| | d) ಆಟೋ ರಹಿತ ವಲಯಗಳ ನಿರ್ಮಾಣ: | | ಡಿ.ಪಿ.ಆರ್ ವರದಿ ಆಧರಿಸಿ ಯೋಜನೆಯ ಮುಂದಿನ ಭಾಗದಲ್ಲಿ ಜಾರಿಗೊಳಿಸಲಾಗುವುದು |
| | e) ಕೇಂದ್ರ ಪ್ರದೇಶಕ್ಕೆ ನಿರ್ಬಂಧಿತ ಸಂಚಾರದ ಪ್ರವೇಶ: | | ಅನುಬಂಧ-1 ಸೂಚಿಸಿದಂತೆ |
| 2. | ಅನಿರ್ಬಾಧಿತ ಸಂಚಾರದ ಹರಿವಿಗಾಗಿ Core ವರ್ತುಲ ರಸ್ತೆಯ ಅಭಿವೃದ್ಧಿ ಇದರಿಂದಾಗಿ ಕೇಂದ್ರ ಪ್ರದೇಶದಿಂದ ಅನಾವಶ್ಯಕ ಸಂಚಾರವನ್ನು ಹೊರತು ಪಡಿಸುವಿಕೆ. | | ಬಿ.ಎಂ.ಪಿ.ಯು ಈ ಬಗ್ಗೆ ಕಾರ್ಯೋನ್ಮುಖವಾಗಿದೆ. |

| | ಕಾರ್ಯಕ್ರಮಗಳು | | ಸಾಧನಾ ಸೂಚಕಗಳು |
|---|---|---|---|
| 3. | ಹಲವಾರು ತ್ರಿಜ್ಯ ರಸ್ತೆಗಳಿಗೆ ವಲಯ ಸಂಚಾರ ನಿಯಂತ್ರಣ ವ್ಯವಸ್ಥೆ (ಎ.ಟಿ.ಸಿ) ಮಾದರಿ ಯಲ್ಲಿ | | ಯೋಜನೆಯು 2ನೇ ವರ್ಷದಲ್ಲಿ ಕೈಗೆತ್ತಿಕೊಳ್ಳಲಾಗುವುದು. |
| 4. | ಮಧ್ಯಂತರ ಹಾಗೂ ಹೊರ ವರ್ತುಲ ರಸ್ತೆಯ ಉನ್ನತೀಕರಣ ಮತ್ತು ಪರಿಧಿ ವರ್ತುಲ ರಸ್ತೆಯ ಅಭಿವೃದ್ಧಿ | | ಬಿ.ಡಿ.ಎ ಮತ್ತು ಬಿ.ಎಂ.ಆರ್.ಡಿ.ಎ ಗಳನ್ನು ಈ ಯೋಜನೆಗಳ ಜಾರಿಗೆ ತೊಡಗಿಸಲಾಗಿದೆ. |
| 5. | ಸುಧಾರಿತ ಗಣಕೀಕೃತ ನಿಯಮ ಜಾರಿ ವ್ಯವಸ್ಥೆ, ಸಾಮರ್ಥ ನಿರ್ಮಾಣ, ಸಂವಹನ, ಗಣಕೀಕರಣ, ಸಂಪರ್ಕಾಭಿವೃದ್ಧಿಗಳೊಂದಿಗೆ ಸಂಚಾರ ಪೊಲೀಸ್‌ನ ಆಧುನೀಕರಣ | | ಪ್ರಸ್ತುತ ಆರ್ಥಿಕ ವರ್ಷದಲ್ಲಿ ಸಂವಹನ ಅಭಿವೃದ್ಧಿ ಜಾರಿ ಸಹಾಯಕ ಉಪಕರಣಗಳನ್ನು ಒದಗಿಸುವುದು, ಸಂಚಾರ ಪೊಲೀಸ್‌ನ ಗಣಕೀಕರಣ ವ್ಯವಸ್ಥೆ, ಸಿಬ್ಬಂದಿಗಳಿಗೆ ಸ್ವರಕ್ಷಣಾತ್ಮಕ ಉಪಕರಣಗಳನ್ನು ಒದಗಿಸುವುದು. ಈ ಅಂಶಗಳ ಉಳಿದ ಭಾಗದ ನಿರ್ವಹಣೆಯನ್ನು ಯೋಜನೆಯ ಮುಂಬರುವ ಅವಧಿಯಲ್ಲಿ ನಿರ್ವಹಿಸಲಾಗುವುದು. |

**ಕೆ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಿ.ಆರ್. 111 ಒಳಾಡಳಿತ ಇಲಾಖೆ, (ಪೊಲೀಸ್ ವೆಚ್ಚ)

**ಲೋಕೋಪಯೋಗಿ ಸಚಿವಾಲಯ**

**ವಿಷಯ:** ತುಮಕೂರು ತಾಲ್ಲೂಕು ತುಮಕೂರು ವಿಧಾನಸಭಾ ಕ್ಷೇತ್ರದಲ್ಲಿನ 4 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಇ: ಸಂಕದ: ಎಇ: ರಸ್ತೆ : ಶಾಖೆ:2006-07, ದಿನಾಂಕ: 14-11-2006.

**ಪ್ರಸ್ತಾವನೆ:-**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ)ಬೆಂಗಳೂರು ಇವರು ತುಮಕೂರು ತಾಲ್ಲೂಕಿನ ತುಮಕೂರು ವಿಧಾನಸಭಾ ಕ್ಷೇತ್ರದ 4 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಸದರಿ ಗ್ರಾಮೀಣ ರಸ್ತೆಗಳು ದುಸ್ಥಿತಿಯಲ್ಲಿದ್ದು, ವಾಹನಗಳು ಮತ್ತು ಸಾರ್ವಜನಿಕರಿಗೆ ಸಂಚರಿಸಲು ತುಂಬಾ ತೊಂದರೆಯಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವುದು ಅವಶ್ಯಕವಾಗಿರುತ್ತದೆ ಎಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ)ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ (ಕಿ.ಮೀ) |
|---|---|---|
| 1 | ಬಾಗೇಪಲ್ಲಿ-ಹಲಗೂರು ರಾಜ್ಯ ಹೆದ್ದಾರಿ-94 ರಿಂದ ಸಿದ್ದಗಂಗಾ ಗ್ರಾಮದ ಪ್ರಾರ್ಥನಾ ಮಂದಿರ ಮತ್ತು ಸಮುದಾಯ ಭವನದ ಮುಖಾಂತರ ಶ್ರೀ ಉದ್ದಾನಸ್ವಾಮೀಜಿ ಕಟ್ಟೆ ರಸ್ತೆಗೆ ಸಂಪರ್ಕಿಸುವ ರಸ್ತೆ. | 1.00 |
| 2 | ಬಾಗೇಪಲ್ಲಿ-ಹಲಗೂರು ರಾಜ್ಯ ಹೆದ್ದಾರಿ-94 ರಿಂದ ಸಿದ್ದಗಂಗಾ ಗ್ರಾಮದ ವಜ್ರ ಮಹೋತ್ಸವ ಕಟ್ಟಡದ ಮುಖಾಂತರ ಅಂಧಮಕ್ಕಳ ಶಾಲೆಗೆ ಕೂಡು ರಸ್ತೆ. | 0.50 |
| 3 | ರಾಷ್ಟ್ರೀಯ ಹೆದ್ದಾರಿ-4 ರಿಂದ ಬಂಡೆಪಾಳ್ಯ ಸಿದ್ದಗಂಗಾ ಗ್ರಾಮದ ಮುಖಾಂತರ ಬಾಗೇಪಲ್ಲಿ ಹಲಗೂರು ರಾಜ್ಯ ಹೆದ್ದಾರಿ-94ಕ್ಕೆ ಸೇರುವ ರಸ್ತೆ. | 1.50 |
| 4 | ಬಾಗೇಪಲ್ಲಿ-ಹಲಗೂರು ರಾಜ್ಯ ಹೆದ್ದಾರಿ-94 ರಿಂದ ಸಿದ್ದಲಿಂಗೇಶ್ವರ ದೇವಸ್ಥಾನಕ್ಕೆ ಕೂಡು ರಸ್ತೆ. | 0.50 |
| | **ಒಟ್ಟು** | **3.50** |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 338 ಸಿಆರ್‌ಎಂ 2006, ಬೆಂಗಳೂರು, ದಿನಾಂಕ: 3ನೇ ಜನವರಿ 2007**

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು, ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಮೇಲೆ ತಿಳಿಸಿರುವ ತುಮಕೂರು ತಾಲ್ಲೂಕಿನ ತುಮಕೂರು ವಿಧಾನಸಭಾ ಕ್ಷೇತ್ರದ 4 ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

6) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 244 ಸಅಸೇ 2001 ದಿನಾಂಕಃ 12.8.2002.
7) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 244 ಸಅಸೇ 2001 ದಿನಾಂಕಃ 31.10.2002.
8) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 24 ಸಸಿವಿ 2005 ದಿನಾಂಕ: 21.4.2005.
9) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 13 ಸಸಿವಿ 2006 ದಿನಾಂಕ: 15.2.2006.
10) ಅ.ಟಿ.ಸಂಖ್ಯೆ: ಸಿಆಸುಇ 267 ಲೆಪ ಐಆರ್‌ಎಲ್‌ಎ 2006 ದಿನಾಂಕ: 4.1.2007.

**ಪ್ರಸ್ತಾವನೆಃ**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 14.3.2000ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಭಾರತೀಯ ಆಡಳಿತ ಸೇವಾ ಅಧಿಕಾರಿಗಳು, ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳು ಹಾಗೂ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿಗಳ ವೇತನ ಪಾವತಿ ಹಾಗೂ ಇತರೆ ವ್ಯಕ್ತಿಗತ ಕ್ಲೇಮ್‌ಗಳ ಪರಿಶೀಲನೆ ಪಾವತಿ ಸಲುವಾಗಿ ಈ ಕೆಳಕಂಡ ಅಧಿಕಾರಿ : ಸಿಬ್ಬಂದಿಗಳನ್ನು ಒಳಗೊಂಡಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ–ಐಆರ್‌ಎಲ್‌ಎ) ಶಾಖೆಯನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದ್ದಿತು.

| | | |
|---|---|---|
| ಅ. | ಸರ್ಕಾರದ ಅಧೀನ ಕಾರ್ಯದರ್ಶಿ | 1 |
| ಆ. | ಶಾಖಾಧಿಕಾರಿ | 1 |
| ಇ. | ಅಕೌಂಟ್ಸ್ ಅಸಿಸ್ಟೆಂಟ್ | 1 |
| ಈ. | ಸಹಾಯಕ | 2 |
| ಉ. | ಕಿರಿಯ ಸಹಾಯಕ | 1 |
| ಊ. | ಶೀಘ್ರಲಿಪಿಗಾರರು | 1 |
| ಋ. | ಕ್ಯಾಷಿಯರ್ | 1 |
| ಋ | ತಾಂತ್ರಿಕ ಸಹಾಯಕರು (ವೇತನ ಶ್ರೇಣಿ ರಹಿತ ಹುದ್ದೆ) | 1 |
| ಎ. | ದಲಾಯತ್ | 1 |

ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 29.7.2000ದ ಸರ್ಕಾರದ ಆದೇಶದಲ್ಲಿ ಅಕೌಂಟ್ಸ್ ಅಸಿಸ್ಟೆಂಟ್‌ಗಳ ಹುದ್ದೆಯನ್ನುಅಕೌಂಟ್ಸ್ ಸೂಪರಿಂಟೆಂಡೆಂಟ್ ಹುದ್ದೆಗೆ ಉನ್ನತೀಕರಿಸಲಾಗಿದೆ. ಹಾಗೂ ಎರಡು ಸಹಾಯಕರ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಹಿರಿಯ ಸಹಾಯಕ ಹುದ್ದೆಗೆ ಉನ್ನತೀಕರಿಸಲಾಗಿದೆ. ಕ್ರಮ ಸಂಖ್ಯೆ (3) ಮತ್ತು (4)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಹುದ್ದೆಗಳನ್ನು ದಿನಾಂಕಃ 13.3.2003 ರವರೆಗೆ ವಿಸ್ತರಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ: 23.4.2002ರ ಸರ್ಕಾರದ ಆದೇಶದಲ್ಲಿ ಈ ಕೆಳಕಂಡ ಅಧಿಕ ಹುದ್ದೆಗಳನ್ನು ಸೃಜಿಸಲಾಗಿರುತ್ತದೆ.

| | | |
|---|---|---|
| ಅ. | ಡಾಟಾ ಎಂಟ್ರಿ ಆಪರೇಟರ್ | 1 |
| ಆ. | ಸಹಾಯಕ | 1 |
| ಇ. | ಬೆರಳಚ್ಚುಗಾರ | 1 |

ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ದಿನಾಂಕ: 12.8.2002ರ ಸರ್ಕಾರದ ಆದೇಶದಲ್ಲಿ ಒಂದು ಸಹಾಯಕ ಹಾಗೂ ಒಂದು ದಲಾಯತ್ ಹುದ್ದೆಗಳನ್ನು ಸೃಜಿಸಲಾಗಿರುತ್ತದೆ. ಅಲ್ಲದೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ದಿನಾಂಕ: 30.10.2002ರ ಸರ್ಕಾರಿ ಆದೇಶದಲ್ಲಿ ಒಂದು ವೇತನ ಶ್ರೇಣಿ ರಹಿತ ತಾಂತ್ರಿಕ ಸಹಾಯಕರ ಹುದ್ದೆಯನ್ನು ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ ಹುದ್ದೆ ಎಂದು ಮರು ಪದನಾಮೀಕರಿಸಲಾಗಿರುತ್ತದೆ.

ಪ್ರಸ್ತುತ ಸರ್ಕಾರದ ಅಧೀನ ಕಾರ್ಯದರ್ಶಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ–ಐಆರ್‌ಎಲ್‌ಎ) ಇವರು ಮೇಲೆ ಕ್ರಮ ಸಂಖ್ಯೆ (10) ರಲ್ಲಿ ಓದಲಾದ ದಿನಾಂಕ: 4.1.2007ರ ಅನಧಿಕೃತ ಟಿಪ್ಪಣಿಯಲ್ಲಿ ಐ.ಆರ್.ಎಲ್.ಎ ಶಾಖೆಯ ಹುದ್ದೆಗಳನ್ನು ದಿನಾಂಕ: 14.3.2007 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 03 ಸಸಿವಿ 2007, ಬೆಂಗಳೂರು, ದಿನಾಂಕಃ 17ನೇ ಜನವರಿ 2007**

ಕರ್ನಾಟಕ ಸರ್ಕಾರ ಸಚಿವಾಲಯದ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಲೆಕ್ಕಪತ್ರ–ಐಆರ್‌ಎಲ್‌ಎ) ಶಾಖೆಯ ಈ ಕೆಳಕಂಡ ಹುದ್ದೆಗಳನ್ನು ದಿನಾಂಕಃ 14.3.2007 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | | |
|---|---|---|
| 1. | ಸರ್ಕಾರದ ಅಧೀನ ಕಾರ್ಯದರ್ಶಿ | 1 |
| 2. | ಶಾಖಾಧಿಕಾರಿ | 1 |
| 3. | ತಾಂತ್ರಿಕ ಸಹಾಯಕರು : ವಿಶೇಷಾಧಿಕಾರಿ (ವೇ.ಶ್ರೇ.ರ) | 1 |
| 4. | ಹಿರಿಯ ಸಹಾಯಕರು | 1 |
| 5. | ಸಹಾಯಕರು | 3 |
| 6. | ಕಿರಿಯ ಸಹಾಯಕರು | 1 |
| 7. | ಶೀಘ್ರಲಿಪಿಗಾರರು | 1 |
| 8. | ಕ್ಯಾಷಿಯರ್ | 1 |
| 9. | ಅಕೌಂಟ್ಸ್ ಸೂಪರಿಂಟೆಂಡೆಂಟ್ | 1 |
| 10. | ಡಾಟಾ ಎಂಟ್ರಿ ಆಪರೇಟರ್ | 1 |

| | | |
|---|---|---|
| 11. | ಬೆರಳಚ್ಚುಗಾರರು | 1 |
| 12. | ದಲಾಯತ್ (ದಲಾಯತ್-1 + ಆಫೀಸ್ ಆರ್ಡರ್ಲಿ-1) | 2 |
| | **ಒಟ್ಟು** | **15** |

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10.7.96 ರಲ್ಲಿ ಸಹಮತಿ ನೀಡಿರುವುದೆಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 172 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಸಿ.ಆ.ಸು.ಇಲಾಖೆ (ಚುನಾವಣೆ) ವಿಭಾಗದಲ್ಲಿ ವಿಶೇಷಾಧಿಕಾರಿ ಹುದ್ದೆಯೊಂದನ್ನು ಸೃಜಿಸುವ ಕುರಿತು.

**ಓದಲಾಗಿದೆ:** ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ ಸಿ.ಆ.ಸು.ಇಲಾಖೆ (ಚುನಾವಣೆ) ಇವರ ಪತ್ರ ಸಂಖ್ಯೆ: ಸಿಆಸುಇ 1 ಚುಸಿಅ 2006 ದಿನಾಂಕ: 18.11.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಚುನಾವಣಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ (ಚುನಾವಣೆ) ಇವರು ಸಿ.ಆ.ಸು.ಇಲಾಖೆಯ ವ್ಯಾಪ್ತಿಯಲ್ಲಿರುವ ಚುನಾವಣಾ ವಿಭಾಗದಿಂದ ಚುನಾವಣೆಗೆ ಸಂಬಂಧಿಸಿದಂತೆ ಎಲ್ಲಾ ವಿಷಯಗಳಲ್ಲಿ ಹೆಚ್ಚಿನ ಚಟುವಟಿಕೆಗಳ ಅಗತ್ಯತೆಯನ್ನು ತರಬೇಕೆಂದು ಭಾರತದ ಚುನಾವಣಾ ಆಯೋಗವು ಇಚ್ಛಿಸಿರುವ ಪ್ರಯುಕ್ತ ಅದರಂತೆ ಕಾರ್ಯನಿರ್ವಹಿಸಲು ಅನುಕೂಲವಾಗಲು ಸಿ.ಆ.ಸು.ಇಲಾಖೆ (ಚುನಾವಣೆ) ವಿಭಾಗದಲ್ಲಿ ಒಂದು ವಿಶೇಷಾಧಿಕಾರಿ (ಚುನಾವಣೆ) ಹುದ್ದೆಯನ್ನು ಪೂರಕ ಸಿಬ್ಬಂದಿಯೊಂದಿಗೆ ಸೃಜಿಸಲು ಕೋರಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 95 ಸಸಿವಿ 2006, ಬೆಂಗಳೂರು, ದಿನಾಂಕ: 17ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಸಿ.ಆ.ಸು.ಇಲಾಖೆ ಚುನಾವಣಾ ವಿಭಾಗದಲ್ಲಿ ಒಂದು ವಿಶೇಷಾಧಿಕಾರಿ (ಚುನಾವಣೆ) ವೇತನ ಶ್ರೇಣಿ ರಹಿತ ಹುದ್ದೆಯೊಂದನ್ನು ಕೆಳಕಂಡ ಪೂರಕ ಸಿಬ್ಬಂದಿಯೊಂದಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಎರಡು ವರ್ಷದ ಅವಧಿಗೆ ಸೃಜಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರರು | 01 |
| 2 | ಕಿರಿಯ ಸಹಾಯಕ | 01 |
| 3 | ದಲಾಯತ್ | 01 |
| | **ಒಟ್ಟು** | 03 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 2214 ವೆಚ್ಚ-5/2006, ದಿನಾಂಕ: 5.1.2007ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 173 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

**ವಿಷಯ:** ಸಹಕಾರ ಇಲಾಖೆಯ ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಅನಧಿಕೃತ ಟಿಪ್ಪಣಿ ಸಂಖ್ಯೆ: ಸಅಇ 628 ಎಸೆಸೇ 2006 ದಿನಾಂಕ: 27.12.2006.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 79 ಸಸಿವಿ 2005, ದಿನಾಂಕ: 10.5.2006 ರಲ್ಲಿ ಸೃಜಿಸಲಾದ ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಜಂಟಿ ಕಾರ್ಯದರ್ಶಿ ಹುದ್ದೆಯ ಕಾಲಾವಧಿಯು ದಿನಾಂಕ: 11.12.2006 ರಂದು ಕೊನೆಗೊಂಡಿರುವುದರಿಂದ ಆ ಹುದ್ದೆಯನ್ನು ದಿನಾಂಕ: 12.12.2006ರಿಂದ ಮುಂದುವರಿಸಿ ಆದೇಶಿಸಲು ಪ್ರಸ್ತಾವನೆ ಇದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 01 ಸಸಿವಿ 2007, ಬೆಂಗಳೂರು, ದಿನಾಂಕ: 16ನೇ ಜನವರಿ 2007**

ಕರ್ನಾಟಕ ಸರ್ಕಾರ ಸಚಿವಾಲಯದ ಸಹಕಾರ ಇಲಾಖೆಯ ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಜಂಟಿ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 12.12.2006 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿದೆ.

ಈ ಆದೇಶವನ್ನು ದಿನಾಂಕ: 10.7.1996ರ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 174 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2).

## ಸಹಕಾರ ಸಚಿವಾಲಯ

**ವಿಷಯ:** ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರನ್ವಯ ಕರ್ನಾಟಕ ಲೋಕ ಸೇವಾ ಆಯೋಗದ ಮುಖಾಂತರ 1998ನೇ ಸಾಲಿನಲ್ಲಿ ಗ್ರೂಪ್ ಬಿ ವೃಂದದ ಹುದ್ದೆಗೆ ಆಯ್ಕೆಯಾಗಿದ್ದ, ಶ್ರೀಮತಿ ಸತ್ಯವತಿ ಎಂ.ರವರ ಆಯ್ಕೆಯನ್ನು ರದ್ದುಪಡಿಸುವ ಬಗ್ಗೆ.

**ಓದಲಾಗಿದೆ:** 1. ಸಂಖ್ಯೆ: ಇ(1)025/ ಪಿಎಸ್.ಸಿ/ 2005-06, ದಿನಾಂಕ:01.03.2006, ಕರ್ನಾಟಕ ಲೋಕಸೇವಾ ಆಯೋಗದ ಪತ್ರ.

2. ಸಿಆಸುಇ 24 ಸೇನಿನಿ 2006, ದಿನಾಂಕ:06.03.2006 ಸಿಆಸುಇ (ಸೇನಿನಿ) ರವರ ಅನಧಿಕೃತ ಟಿಪ್ಪಣಿ.

3. ಸಇ 79 ಎಲೆಸೇ 2006, ದಿನಾಂಕ:14.03.2006.

4. ಶ್ರೀಮತಿ ಸತ್ಯವತಿ ಎಂ. ರವರ ಮನವಿ ದಿನಾಂಕ:21.03.2006.

5. ಸಇ 79 ಎಲೆಸೇ 2006, ದಿನಾಂಕ:22.04.2006.

6. ಶ್ರೀಮತಿ ಸತ್ಯವತಿ ಎಂ. ರವರ ಮನವಿ ದಿನಾಂಕ:01.10.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿನ ಕರ್ನಾಟಕ ಲೋಕಸೇವಾ ಆಯೋಗದ ಪತ್ರದಲ್ಲಿ ಕರ್ನಾಟಕ ಗೆಟೆಟೆಡ್ ಪ್ರೊಬೇಷನರ್‌ಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರಡಿ ಕರ್ನಾಟಕ ಲೋಕಸೇವಾ ಆಯೋಗದಿಂದ ಅಧಿಸೂಚನೆ ಸಂಖ್ಯೆ: ಸಿಎನ್ ಎಫ್‌ಟಿ/ 25/ 2005-06 ಪಿಎಸ್‌ಸಿ ದಿನಾಂಕ:08.02.2006ರಲ್ಲಿ 1998ನೇ ತಂಡದ ಪತ್ರಾಂಕಿತ ಪರೀಕ್ಷಾರ್ಥಿಗಳಾಗಿ ಆಯ್ಕೆಯಾಗಿ ದಿನಾಂಕ:28.02.2006ರ ಕರ್ನಾಟಕ ರಾಜ್ಯ ಪತ್ರ (ವಿಶೇಷ ಸಂಚಿಕೆ)ಯಲ್ಲಿ ಪ್ರಕಟಿಸಲ್ಪಟ್ಟಿರುವ 36 ಜನ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆಗೆ ಸಹಾಯಕ ನಿರ್ದೇಶಕರ ಹುದ್ದೆಗೆ ಆಯ್ಕೆಯಾಗಿದ್ದು, ಆ ಪೈಕಿ ಶ್ರೀಮತಿ ಸತ್ಯವತಿ ಎಂ. (ಕ್ರ.ಸಂ.31) ರವರು ಸಹ ಒಬ್ಬರಾಗಿರುತ್ತಾರೆ.

ಮೇಲೆ ಓದಲಾದ (2)ರಲ್ಲಿನ ಪತ್ರದಲ್ಲಿ ಸಿಬ್ಬಂದಿ ಆಡಳಿತ ಸುಧಾರಣೆ ಇಲಾಖೆಯು ಸದರಿ ಅಭ್ಯರ್ಥಿಯ ಗುಣ ನಡತೆ ಹಾಗೂ ಪೂರ್ವಚರಿತ್ರೆಯನ್ನು ಪರಿಶೀಲಿಸಲು ಮತ್ತು ವೈದ್ಯಕೀಯ ಪರೀಕ್ಷೆಗೊಳಪಡಿಸಿ ಅವರಿಗೆ ಸೂಕ್ತ ನೇಮಕಾತಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ತದನಂತರ ಮೇಲೆ ಓದಲಾದ (3)ರಲ್ಲಿನ ಪತ್ರದಲ್ಲಿ ಶ್ರೀಮತಿ ಸತ್ಯವತಿ ಎಂ. ರವರಿಗೆ ವೈದ್ಯಕೀಯ ಮಂಡಳಿಯ ಮುಂದೆ ಹಾಜರಾಗಿ ವೈದ್ಯಕೀಯ ವರದಿ ನೀಡುವಂತೆ ಅಧೀಕ್ಷಕರು, ಕೆ.ಸಿ. ಜನರಲ್ ಆಸ್ಪತ್ರೆ, ಬೆಂಗಳೂರು ರವರನ್ನು ಕೋರಲಾಗಿತ್ತು.

ಮೇಲೆ ಓದಲಾದ (4)ರಲ್ಲಿನ ಮನವಿಯಲ್ಲಿ ಶ್ರೀಮತಿ ಸತ್ಯವತಿ ಎಂ. ತಾವು ವಿದೇಶದಲ್ಲಿ ನೆಲೆಸಿರುವುದಾಗಿ ತಿಳಿಸಿ ಕೆಲವು ಕೌಟುಂಬಿಕ ಕಾರಣಗಳ ಹಿನ್ನೆಲೆಯಲ್ಲಿಯ ವೈದ್ಯಕೀಯ ಮಂಡಳಿಯ ಮುಂದೆ ಹಾಜರಾಗಲು ಕಾಲಾವಕಾಶವನ್ನು ಕೋರಿರುತ್ತಾರೆ. ಅದರಂತೆ ಮೇಲೆ ಓದಲಾದ (5)ರಲ್ಲಿನ ಸರ್ಕಾರದ ಅಧಿಸೂಚನೆಯಲ್ಲಿ ಶ್ರೀಮತಿ ಸತ್ಯವರಿ ಎಂ. ರವರಿಗೆ ವೈದ್ಯಕೀಯ ಮಂಡಳಿಯ ಮುಂದೆ ಹಾಜರಾಗಲು ಷರತ್ತಿನೊಂದಿಗೆ ಆರು ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಪುನಃ ಅವರು ಮೇಲೆ ಓದಲಾದ (6)ರಲ್ಲಿನ ಪತ್ರದಲ್ಲಿ ಎರಡನೇ ಬಾರಿಗೆ ಕಾಲಾವಕಾಶವನ್ನು ವಿಸ್ತರಿಸುವಂತೆ ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳನ್ವಯ ಪರಿಶೀಲಿಸಿದ ನಂತರ ಶ್ರೀಮತಿ ಸತ್ಯವತಿ ಎಂ. ರವರು ನಿಗದಿತ ಕಾಲಾವದಿಯೊಳಗೆ ವೈದ್ಯಕೀಯ ಪರೀಕ್ಷೆಗೆ ಮಂಡಳಿಯ ಮುಂದೆ ಹಾಜರಾಗದೇ ಇರುವುದರಿಂದ ಅವರ ಆಯ್ಕೆಯನ್ನು ರದ್ದುಪಡಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ.79.ಎಲೆಸೇ 2006, ಬೆಂಗಳೂರು, ದಿನಾಂಕ:5ನೇ ಫೆಬ್ರವರಿ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರ್‌ಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು, 1997ರಡಿ ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ: ಸಿಎನ್‌ಟಿ/ 25/ 2005-06/ ಪಿಎಸ್‌ಸಿ, ದಿನಾಂಕ:28.02.2006ರಲ್ಲಿ 1998ನೇ ತಂಡದ ಪತ್ರಾಂಕಿತ ಪರೀಕ್ಷಾರ್ಥಿಯಾಗಿ ದಿನಾಂಕ:28.02.2006ರ ಕರ್ನಾಟಕ ರಾಜ್ಯ ಪತ್ರದ (ವಿಶೇಷ ಸಂಚಿಕೆ) ಯಲ್ಲಿ ಪ್ರಕಟಿಸಲ್ಪಟ್ಟು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಸಹಾಯಕ ನಿರ್ದೇಶಕರ (ಪ್ರೊಬೇಷನರಿ) ಹುದ್ದೆಗೆ ಆಯ್ಕೆಯಾಗಿರುವ ಈ ಕೆಳಕಂಡ ಅಭ್ಯರ್ಥಿಯ ಆಯ್ಕೆಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977ರ ನಿಯಮ 12 ಉಪ ನಿಯಮ 1(ಎ) ರನ್ವಯ ರದ್ದುಪಡಿಸಲಾಗಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ನೊಂದಣಿ ಕ್ರ.ಸಂ. | ಹುಟ್ಟಿದ ದಿನಾಂಕ | ಮೀಸಲಾತಿ | ಗಳಿಸಿದ್ದ ಅಂಕಗಳು |
|---|---|---|---|---|---|
| 31. | ಶ್ರೀಮತಿ ಸತ್ಯವತಿ ಎಂ.<br>ಮುನಿನಾರಾಯಣ ಆರ್. ರವರ ಮಗಳು,<br>ಮ.ಸಂ.41, 3ನೇ ಕ್ರಾಸ್, ಮಾಗಡಿ ಮುಖ್ಯ ರಸ್ತೆ,<br>ಹೆಚ್.ವಿ.ಆರ್. ಲೇಔಟ್, ಬೆಂಗಳೂರು-560079. | 135010 | 21.05.1971 | 2 ಎ/ ಎಫ್ | 864.00 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರಪುರಕರ್ ವೆಂಕಟೇಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

ಪಿ.ಆರ್. 366

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಮುಖ್ಯ ವಾಸ್ತುಶಿಲ್ಪಿ ಇಲಾಖೆಯಲ್ಲಿ ಮುಖ್ಯ ಡ್ರಾಫ್ಟ್ಸ್‌ಮನ್ ಹುದ್ದೆಗಳನ್ನು ಸೃಜಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಮುಖ್ಯ ವಾಸ್ತುಶಿಲ್ಪ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಎ:ಸಿ-4:544: 2006-07, ದಿನಾಂಕ:06.06.2006 ಮತ್ತು ಸಿಎ:ಸಿ-4:1132:2006-07, ದಿನಾಂಕ:17.08.2006.

2. ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ: ಸಿಆಸುಇ 38 ಸೇನಿಇ 96, ದಿನಾಂಕ:01.08.1996.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 06.06.2006 ಮತ್ತು 17.08.2006ರ ಮುಖ್ಯ ವಾಸುಶಿಲ್ಪಿ ಇವರ ಪತ್ರಗಳಲ್ಲಿ ಸದರಿ ಇಲಾಖೆಯು 1910ರಲ್ಲಿ ಸ್ಥಾಪಿತಗೊಂಡು ದಿನಾಂಕ:30.10.1986ರಲ್ಲಿ ಲೋಕೋಪಯೋಗಿ ಇಲಾಖೆಯಿಂದ ಬೇರ್ಪಟ್ಟು ಸ್ವತಂತ್ರ ಇಲಾಖೆಯಾಗಿ ಕಾರ್ಯ ನಿರ್ವಹಿಸುತ್ತಿದೆ. ನಂತರ ವಾಸ್ತುಶಿಲ್ಪಿ ಇಲಾಖೆಗೆ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸಲಾಗಿರುತ್ತದೆ. ವಾಸ್ತುಶಿಲ್ಪಿ ಇಲಾಖೆಯು ಸರ್ಕಾರದ ಪ್ರತಿಯೊಂದು ಇಲಾಖೆಯ ಕಟ್ಟಡಗಳು, ಪ್ರಮುಖ ಯೋಜನೆಗಳ ನಕ್ಷೆ ಮತ್ತು ಮಾದರಿ ತಯಾರಿಸಲು ಗುರುತರವಾದ ಹೊಣೆಗಾರಿಕೆ ಈ ಇಲಾಖೆಯದ್ದಾಗಿರುತ್ತದೆ ಹಾಗೂ ಸರ್ಕಾರಿ ಕಟ್ಟಡಗಳ ನಕ್ಷೆಯನ್ನು ತಯಾರಿಸಿ ಆ ಕಟ್ಟಡಗಳ ಉಸ್ತುವಾರಿ ನೋಡಿಕೊಳ್ಳುವುದು ಮತ್ತು ಸರ್ಕಾರದ ಪ್ರತಿಷ್ಠಿತ ಕಟ್ಟಡ ಕಾಮಗಾರಿಗಳ ಕರ್ನಾಟಕ ಉಚ್ಚ ನ್ಯಾಯಾಲಯ, ವಿಕಾಸಸೌದ ಮತ್ತು ಕನ್ನಡ ಭವನಗಳ ವಿನ್ಯಾಸವನ್ನು ಈ ಕಛೇರಿಯಿಂದಲೇ ನಿರ್ವಹಿಸಲಾಗುತ್ತಿದ್ದು ಇನ್ನು ಮುಂದೆ ಈ ವಾಸ್ತುಶಿಲ್ಪಿ ಇಲಾಖೆಯನ್ನು ಇನ್ನೂ ಹೆಚ್ಚಿನ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುವ ನಿಟ್ಟಿನಲ್ಲಿ ಬಡ್ತಿಯಿಲ್ಲದೆ ಸುಮಾರು 10 ರಿಂದ 15 ವರ್ಷಗಳ ನಿರಂತರವಾಗಿ ಒಂದೇ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿ ಮತ್ತು ನೌಕರರಿಗೆ ಬಡ್ತಿ ಅವಕಾಶ ಕಲ್ಪಿಸುವ ನಿಟ್ಟಿನಲ್ಲಿ ಮುಖ್ಯ ಡ್ರಾಫ್ಟ್‌ಮನ್ ಹುದ್ದೆಗಳನ್ನು ವೇತನ ಶ್ರೇಣಿ ರೂ.7400-13100ರಲ್ಲಿ ಸೃಜಿಸಲು ಮುಖ್ಯ ವಾಸ್ತುಶಿಲ್ಪಿಯವರ ಪ್ರಸ್ತಾವನೆಯಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ವಾಸ್ತುಶಿಲ್ಪಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿಪಡಿಸದೇ ಇರುವ ಹುದ್ದೆಗಳನ್ನು ಒಂದು ಕಾರ್ಯಕಾರಿ ಆದೇಶದ ಮೇರೆಗೆ ನಿಗದಿಪಡಿಸಿ ಆದೇಶ ಹೊರಡಿಸುವ ಷರತ್ತಿಗೊಳಪಟ್ಟು ಸೃಜಿಸಲು ಕ್ರಮಸಂಖ್ಯೆ (2)ರ ಅಧಿಕೃತ ಜ್ಞಾಪನದಲ್ಲಿ ಅವಕಾಶ ಕಲ್ಪಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 10 ಸೇವಾಬ 06, ದಿನಾಂಕ:24ನೇ ಫೆಬ್ರವರಿ, 2007**

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಶವಾಗಿ ಪರಿಶೀಲಿಸಿ ಮುಖ್ಯ ವಾಸ್ತುಶಿಲ್ಪಿ ಇಲಾಖೆ, ಬೆಂಗಳೂರು ಇವರು ಶಿಫಾರಸ್ಸು ಮಾಡಿರುವಂತೆ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಮಂಜೂರಾಗಿರುವ 9 ಡ್ರಾಫ್ಟ್‌ಮನ್ ಹುದ್ದೆಗಳ ಪೈಕಿ 3 ಡ್ರಾಫ್ಟ್‌ಮನ್ ಹುದ್ದೆಗಳನ್ನು ಮತ್ತು 7 ಟ್ರೇಸರ್ ಹುದ್ದೆಗಳ ಪೈಕಿ 2 ಟ್ರೇಸರ್ ಹುದ್ದೆಗಳನ್ನು (ಒಟ್ಟು 5 ಗ್ರೂಪ್ ಸಿ ಹುದ್ದೆಗಳು) ರದ್ದುಪಡಿಸಿ ಅವುಗಳ ಬದಲಿಗೆ ಇಲಾಖೆಗೆ ಅಗತ್ಯವಿರುವ 2 (ಎರಡು) ಮುಖ್ಯ ಡ್ರಾಫ್ಟ್‌ಮನ್ ಹುದ್ದೆಗಳನ್ನು (ವೇತನ ಶ್ರೇಣಿ ರೂ.7400-13100) ಸೃಜಿಸಲು ಸರ್ಕಾರ ಮಂಜೂರಾತಿ ನೀಡಿದೆ.

ಸದರಿ ಆದೇಶವನ್ನು ವೃಂದ ಮತ್ತು ನೇಮಕಾತಿ ನಿಯಮದಲ್ಲಿ ತಿದ್ದುಪಡಿ ಮಾಡುವ ಷರತ್ತಿಗೊಳಪಟ್ಟು ಕಾರ್ಯಕಾರಿ ಆದೇಶವನ್ನು ಹೊರಡಿಸುವುದನ್ನು ಗಮನದಲ್ಲಿಟ್ಟುಕೊಂಡು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ 520 ಆಕೋ-3: 2006, ದಿನಾಂಕ:10.11.2006ರಲ್ಲಿ ನೀಡಲಾದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಗವಿಯಯ್ಯ**

ಪಿ.ಆರ್. 382

ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ ಇಲಾಖೆ (ಸೇವೆಗಳು-ಬಿ).

**ಸಮಾಜ ಕಲ್ಯಾಣ ಸಚಿವಾಲಯ**

**ಸುತ್ತೋಲೆ**

**ಸಂಖ್ಯೆ: ಸಕಇ 256 ಬಿಸಿಎ 2006, ಬೆಂಗಳೂರು, ದಿನಾಂಕ:7ನೇ ಮಾರ್ಚ್, 2007**

**ವಿಷಯ:** ಸಾರ್ವಜನಿಕ ಸರಕುಗಳು ಮತ್ತು ಸೇವೆಗಳ ಸಂಗ್ರಹಣೆಯಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಗಳ ಹಾಗೂ ಇತರೆ ಹಿಂದುಳಿದ ವರ್ಗಗಳ ಅರ್ಜಿದಾರರಿಗೆ ಮೀಸಲಾತಿ ನೀಡುವ ಕುರಿತು.

**ಉಲ್ಲೇಖ:** ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 34 ಬಿಸಿಎ 2004, ದಿನಾಂಕ:10.03.2005

**ಪ್ರಸ್ತಾವನೆ:**

ಮೇಲೆ ತಿಳಿಸಿದ ವಿಷಯವಾಗಿ ಹೊರಡಿಸಲಾದ ಉಲ್ಲೇಖಿತ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ (ಕರ್ನಾಟಕ ಅಧಿನಿಯಮ ಸಂಖ್ಯೆ:29) ಉಪಬಂಧದ ಮೂಲಕ ವಿನಾಯಿತಿ ನೀಡಲಾಗಿರುವ ಸಂಗ್ರಹಣೆಗೆ ರೂ.1.00 ಲಕ್ಷ ರೂಪಾಯಿಗಿಂತ ಕಡಿಮೆ ಇರುವ ಸರ್ಕಾರಿ ಸ್ವಾಮ್ಯದ ವಿವಿಧ ಸಂಗ್ರಹಣೆ ಹಕ್ಕುಗಳಲ್ಲಿ ಕಾಮಗಾರಿಗಳ, ಸರಕುಗಳ ಹಾಗೂ ಸೇವೆಗಳ ಸಂಗ್ರಹಣೆಗೆ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ/ ಇತರೆ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಸಮುದಾಯಕ್ಕೆ ಸೇರಿದ ವ್ಯಾಪಾರಿಗಳು/ ಗುತ್ತಿಗೆದಾರರು/ ಸೇವಾ ಪ್ರವರ್ತಕರಿಗೆ ರಾಜ್ಯ ಸರ್ಕಾರ ಶೇ.50 ರಷ್ಟು ಆದ್ಯತೆ ನೀಡಿದ್ದು ಅದರಲ್ಲಿ ಪ್ರತಿ ಪ್ರವರ್ಗಗಳಿಗೆ ನೀಡಬೇಕಾಗಿರುವ ಆದ್ಯತೆ ಈ ಕೆಳಗಿನಂತಿದೆ.

| | | |
|---|---|---|
| I | ಪರಿಶಿಷ್ಟ ಜಾತಿ | ಶೇ.20 |
| II | ಪರಿಶಿಷ್ಟ ಪಂಗಡ | ಶೇ.05 |
| III | ಇತರೆ ಹಿಂದುಳಿದ ವರ್ಗ | ಶೇ.20 |
| IV | ಅಲ್ಪಸಂಖ್ಯಾತರು | ಶೇ.05 |

ಈ ಮೀಸಲಾತಿ ಪ್ರಮುಖ ಹಾಗೂ ಆದೇಶದಲ್ಲಿ ನೀಡಿದ ನಿರ್ದೇಶನಗಳನ್ನು ಯಾವುದೇ ಇಲಾಖೆ ಪಾಲಿಸುತ್ತಿಲ್ಲ ಎಂಬುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಕಾರಣ ದಿನಾಂಕ:10.03.2005ರ ಆದೇಶವನ್ನು ಎಲ್ಲಾ ಇಲಾಖಾ ಅಧಿಕಾರಿಗಳು ತಮ್ಮ ಇಲಾಖಾ ವ್ಯಾಪ್ತಿಗೆ ಬರುವ ಕಾರ್ಯಕ್ರಮಗಳ ಅನುಷ್ಠಾನಗಳಲ್ಲಿ ಕಟ್ಟುನಿಟ್ಟಾಗಿ ಅಳವಡಿಸುವಂತೆ ಸೂಚಿಸಲಾಗಿದೆ. ಆದೇಶದ ಅನುಷ್ಠಾನದಲ್ಲಿ ಉಲ್ಲಂಘನೆಯಾದಲ್ಲಿ ಅಂತಹ ವಿಷಯಗಳ ಬಗ್ಗೆ ಸಂಬಂಧಪಟ್ಟ ಇಲಾಖೆಗಳು ನಿಯಮಾನುಸಾರ ಸೂಕ್ತ ಕ್ರಮ ಜರುಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 419

**ಆರ್.ನಾರಾಯಣಮೂರ್ತಿ**

ಸರ್ಕಾರದ ಉಪ ಕಾರ್ಯದರ್ಶಿ-3, ಸಮಾಜ ಕಲ್ಯಾಣ ಇಲಾಖೆ.

## ಕಾರ್ಮಿಕ ಸಚಿವಾಲಯ

**ವಿಷಯ:** ಉದ್ಯೋಗ ಮತ್ತು ತರಬೇತಿ ಇಲಾಖೆಯ, ಉದ್ಯೋಗ ವಿಭಾಗದ ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸೇಇವಿ 2003, ದಿನಾಂಕ:01.09.2003.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸೇಇವಿ 2003, ದಿನಾಂಕ:17.05.2004.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಇವಿ 2004 (ಭಾಗ), ದಿನಾಂಕ:27.05.2005.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಎಸ್‌ಡಿಇ 2004, ದಿನಾಂಕ:24.12.2005.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಎಸ್‌ಡಿಇ 2004, ದಿನಾಂಕ:05.01.2007.
6. ಪತ್ರ ಸಂಖ್ಯೆ: ಉತನಿ/ ಉದ್ಯೋಗ/ ಆಡಳಿತ-1ಎ/ ವಿವ-27/ 2004-05 ದಿನಾಂಕ:18.01.2007.

**ಪ್ರಸ್ತಾವನೆ:**

ರಾಜ್ಯ ಸರ್ಕಾರದ ನೌಕರರಿಗೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪ್ರಕಟಿಸಲಾಗಿದೆ. ಮೇಲೆ (2) ರಿಂದ (5)ರವರೆಗೆ ಓದಲಾದ ಸರ್ಕಾರದ ಆದೇಶಗಳಲ್ಲಿ ಸದರಿ ವಿಶೇಷ ಸ್ವಯಂ ನಿವೃತಿ ಯೋಜನೆಯನ್ನು ಕಾಲಕಾಲಕ್ಕೆ ಮುಂದುವರೆಸಿದ್ದು ಅಂತಿಮವಾಗಿ ದಿನಾಂಕ:31.01.2007ರವರೆಗೆ ವಿಸ್ತರಿಸಲ್ಪಟ್ಟಿದೆ.

ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು ರವರು ಮೇಲೆ (6)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಉದ್ಯೋಗ ವಿಭಾಗದ ಶ್ರೀಮತಿ ಕೆ.ಎನ್. ಮಂಜುಳ, ಪ್ರಥಮ ದರ್ಜೆ ಸಹಾಯಕರು, ಶ್ರೀ ಎನ್.ಗೌತಮ, ದ್ವಿತೀಯ ದರ್ಜೆ ಸಹಾಯಕರು, ಶ್ರೀಮತಿ ಸರೋಜಿನಿ ರುದ್ರಪ್ಪ ಉಪ್ಪಾರ, ಸಮೂಹ-ಡಿ ನೌಕರರು ಮತ್ತು ಶ್ರೀ ಎ.ಎ. ಅಲಿ, ಸಹಾಯಕ ಉದ್ಯೋಗಾಧಿಕಾರಿ ಇವರುಗಳಿಗೆ ವಿಶೇಷ ಸ್ವಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಶ್ರೀಮತಿ ಕೆ.ಎನ್. ಮಂಜುಳ, ಪ್ರಥಮ ದರ್ಜೆ ಸಹಾಯಕರು, ಶ್ರೀ ಎನ್. ಗೌತಮ, ದ್ವಿತೀಯ ದರ್ಜೆ ಸಹಾಯಕರು, ಶ್ರೀ ಎ.ಎ. ಅಲಿ, ಸಹಾಯಕ ಉದ್ಯೋಗಾಧಿಕಾರಿ ರವರು ವಿಶೇಷ ಸ್ವಯಂ ನಿವೃತ್ತಿ ಹೊಂದಲು ಅನುಮತಿ ನೀಡಲು ಮತ್ತು ಶ್ರೀಮತಿ ಸರೋಜಿನಿ ರುದ್ರಪ್ಪ ಉಪ್ಪಾರ, ಸಮೂಹ-ಡಿ ನೌಕರರವರು ಇಪ್ಪತ್ತು ವರ್ಷಗಳ ಸೇವೆಯನ್ನು ಪೂರೈಸದಿರುವುದರಿಂದ ಹಾಗೂ ಐವತ್ತೈದು ವರ್ಷಗಳ ವಯಸ್ಸನ್ನು ದಾಟಿರುವುದರಿಂದ ಅನುಮತಿ ನೀಡದಿರಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 03 ಇಟಿಎಕ್ಸ್, 2007, ಬೆಂಗಳೂರು, ದಿನಾಂಕ:31ನೇ ಜನವರಿ, 2007**

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸೇಇವಿ 2003, ದಿನಾಂಕ:01.09.2003, 17.05.2004, ಮತ್ತು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಎಸ್‌ಡಿಇ 2004, ದಿನಾಂಕ:05.01.2007ರಲ್ಲಿ ಪ್ರಕಟಿಸಿರುವ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿಭಾಗದ ಈ ಕೆಳಕಂಡ ಮೂವರು ನೌಕರರು ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಲು ಈ ಕೂಡಲೇ ಜಾರಿಗೆ ಬರುವಂತೆ ಅನುಮತಿ ನೀಡಲಾಗಿದೆ ಹಾಗೂ ಅವರು ಹೊಂದಿರುವ ಹುದ್ದೆಗಳನ್ನು ರದ್ದುಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಹೆಸರು/ ಪದನಾಮ |
|---|---|
| 1. | ಶ್ರೀ ಎ.ಎ. ಅಲಿ, ಸಹಾಯಕ ಉದ್ಯೋಗಾಧಿಕಾರಿ, ಜಿಲ್ಲಾ ಉದ್ಯೋಗ ವಿನಿಮಯ ಕೇಂದ್ರ, ಮಡಿಕೇರಿ. |
| 2. | ಶ್ರೀಮತಿ ಕೆ.ಎನ್. ಮಂಜುಳ, ಪ್ರಥಮ ದರ್ಜೆ ಸಹಾಯಕರು, ಉದ್ಯೋಗ ವಿನಿಮಯ ಕೇಂದ್ರ (ಖಾಹುಕಅ) ಅಧಿನಿಯಮ ಜಾರಿ ಘಟಕ, ಮೈಸೂರು. |
| 3. | ಶ್ರೀ ಎನ್. ಗೌತಮ, ದ್ವಿತೀಯ ದರ್ಜೆ ಸಹಾಯಕರು, ಉದ್ಯೋಗ ಮತ್ತು ತರಬೇತಿ ನಿರ್ದೇಶನಾಲಯ (ಉದ್ಯೋಗ ವಿಭಾಗ), ಬೆಂಗಳೂರು. |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 15 ಸೇಇವಿ 2003, ದಿನಾಂಕ:17.05.2004ರ ಪ್ರತ್ಯಾಯೋಜಿತ ಅಧಿಕಾರಗಳೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀರಾಮರೆಡ್ಡಿ**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ.

(ಉದ್ಯೋಗ ಮತ್ತು ತರಬೇತಿ)

ಪಿ.ಆರ್. 420

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಅಶ್ವತ್ಥನಾರಾಯಣ, ಪಿ.ಐ. ಬೈಯಪ್ಪನ ಹಳ್ಳಿ ಪೊಲೀಸ್ ಠಾಣೆ ಮತ್ತು ಶ್ರೀ ಸಂಗ್ರಾಮ್ ಸಿಂಗ್, ನಿವೃತ್ತ ಎ.ಸಿ.ಪಿ. ರವರು ವಿರುದ್ಧ ಜಂಟಿ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:** 1. ಡಿಜಿ ಮತ್ತು ಐ.ಜಿ.ಪಿ. ಬೆಂಗಳೂರು ರವರ ಪತ್ರ ಸಂಖ್ಯೆ: ಅಪೀಲು (1) 17/ 2004 ದಿನಾಂಕ: 21.07.2004.
2. ಸರ್ಕಾರದ ಆದೇಶ ಸಂಖ್ಯೆ: ಬಿಇ 172 ಪೊಸಿಪ 2004, ದಿನಾಂಕ:12.04.2005.
3. ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ: ಅಪೀಲು (1) 17/ 2004 ದಿನಾಂಕ:04.12.2006.

**ಪ್ರಸ್ತಾವನೆ:**

ಶ್ರೀ ಅಶ್ವತ್ಥನಾರಾಯಣ, ಪಿ.ಐ. ಬೈಯಪ್ಪನ ಹಳ್ಳಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಶ್ರೀಮತಿ ಅಸ್ಮತ್ ಉನ್ನಿಸಾ ಕೋಂ ಶೇಕ್ ಸರದಾರ ಮನೆಯ ಮಾಲೀಕರಾದ ಶ್ರೀಮತಿ ಮಲ್ಲಿಕಾ ಮತ್ತು ಅವರ ಪತಿ ತನಗೆ ಕಿರುಕುಳ ನೀಡಿ ಹಿಂಸಿಸಿದ ಬಗ್ಗೆ ಬೈಯಪ್ಪನ ಹಳ್ಳಿ ಪೊಲೀಸ್ ಠಾಣೆಗೆ ದೂರು ನೀಡಿದ್ದು ಅವರ ಫಿರ್ಯಾದನ್ನು ಸ್ವೀಕರಿಸಿ ಕ್ರಮಕೈಗೊಳ್ಳದೆ ಇದ್ದ ಕಾರಣ ಶ್ರೀ ಸಂಗ್ರಾಮ್ ಸಿಂಗ್ ಎ.ಸಿ.ಪಿ. ರವರಿಗೆ ಫಿರ್ಯಾದು

ನೀಡಿರುತ್ತಾರೆ ಎಂದು, ಅವರು ಸಹ ಯಾವುದೇ ಕ್ರಮ ಕೈಗೊಳ್ಳದೆ ಇರುವ ಕಾರಣ ಫಿರ್ಯಾದುದಾರರು ಮಾನ್ಯ ಕರ್ನಾಟಕ ಲೋಕಾಯುಕ್ತ ರವರಿಗೆ ದೂರು ನೀಡಿರುತ್ತಾರೆ. ಮಾನ್ಯ ಕರ್ನಾಟಕ ಲೋಕಾಯುಕ್ತ ರವರ ಸದರಿ ಪೊಲೀಸ್ ಅಧಿಕಾರಿಗಳನ್ನು ಕರೆಸಿ ಕ್ರಿಮಿನಲ್ ಅಪರಾಧದ ವಿರುದ್ಧ ಕ್ರಮಕೈಗೊಳ್ಳಲು ಸೂಚಿಸಿದ್ದರೂ ಸಹ ಹಿರಿಯ ಅಧಿಕಾರಿಗಳ ಸೂಚನೆಗೆ ನಿರ್ಲಕ್ಷತೆ ತೋರಿಸಿದ್ದರಿಂದ ಅವರ ವಿರುದ್ಧ ಕ್ರಮಕೈಗೊಳ್ಳಲು ಲೋಕಾಯುಕ್ತ ರವರ ದಿನಾಂಕ: 07.06.2004 ರ ಪತ್ರದಲ್ಲಿ ಸೂಚಿಸಿರುತ್ತಾರೆ. ಶ್ರೀ ಸಂಗ್ರಾಮ್ ಸಿಂಗ್, ಎ.ಸಿ.ಪಿ. ರವರ ದಿನಾಂಕ: 31.01.2004 ರಂದು ವಯೋ ನಿವೃತ್ತಿ ಹೊಂದಿರುವುದರಿಂದ ಕೆ.ಸಿ.ಎಸ್.ಆರ್. ನಿಯಮ 214ರನ್ವಯ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಬೇಕೆಂದು ಹಾಗೂ ಆಪಾದಿತರ ವಿರುದ್ಧ ಕೆ.ಎಸ್.ಪಿ. (ಡಿ.ಪಿ.) ನಿಯಮಗಳು, 1965ರ ನಿಯಮ 6 ಮತ್ತು 8ರ ಅಡಿಯಲ್ಲಿ ಇಬ್ಬರು ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸುವಂತೆ ಮೇಲೆ ಓದಲಾದ ಉಲ್ಲೇಖ (1)ರ ದಿನಾಂಕ:21.07.2004ರ ಪತ್ರದಲ್ಲಿ ಡಿಜಿ ರವರು ಸರ್ಕಾರಕ್ಕೆ ಕೋರಿರುತ್ತಾರೆ. ಉಲ್ಲೇಖ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಐ.ಜಿ.ಪಿ. (ಡಿ.ಸಿ.ಆರ್.ಇ) ರವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರವು ಆದೇಶಿಸಿದೆ.

ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ ವಿಚಾರಣೆ ನಡೆಸಿ ದಿನಾಂಕ:20.11.2006ರಂದು ವಿಚಾರಣಾಧಿಕಾರಿಗಳು ವರದಿ ನೀಡಿರುತ್ತಾರೆ. ವಿಚಾರಣಾಧಿಕಾರಿಗಳು ಆರೋಪಿತ ಪೊಲೀಸ್ ಅಧಿಕಾರಿ 1 ಶ್ರೀ ಅಶ್ವತ್ಥನಾರಾಯಣ, ಪಿ.ಐ. ಮತ್ತು ಆರೋಪಿತ ಪೊಲೀಸ್ ಅಧಿಕಾರಿ-2 ಶ್ರೀ ಸಂಗ್ರಾಮ್ ಸಿಂಗ್, ನಿವೃತ್ತ ಎ.ಸಿ.ಪಿ. ರವರ ವಿರುದ್ಧ ಮಾಡಿರುವ ಆಪಾದನೆಗಳು ಸಾಬೀತಾಗಿರುವುದಿಲ್ಲ ಎಂಬ ನಿರ್ಣಯಕ್ಕೆ ಬಂದಿರುತ್ತಾರೆ. ಮೇಲೆ (3)ರಲ್ಲಿ ಓದಲಾದ ವರದಿಯಲ್ಲಿ ಡಿ.ಜಿ.ಪಿ. ರವರು ವಿಚಾರಣಾಧಿಕಾರಿಗಳ ವರದಿಯನ್ನು ಅನುಮೋದಿಸುತ್ತಾ ಸರ್ಕಾರದಿಂದ ಅಂತಿಮ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ. ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 172 ಪೊಸಿಪ 2004, ಬೆಂಗಳೂರು, ದಿನಾಂಕ:17ನೇ ಫೆಬ್ರವರಿ, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಅಶ್ವತ್ಥನಾರಾಯಣ, ಪಿ.ಐ. ಮತ್ತು ಶ್ರೀ ಸಂಗ್ರಾಮ್ ಸಿಂಗ್, ನಿವೃತ್ತ ಎ.ಸಿ.ಪಿ. ರವರ ವಿರುದ್ಧ ಹೂಡಿದ ಇಲಾಖಾ ವಿಚಾರಣೆಯಿಂದ ದೋಷಮುಕ್ತಗೊಳಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 328

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** 2006-2007ನೇ ಸಾಲಿಗೆ ಎಸ್‌ಜಿಎಸ್‌ವೈ ಎರಡನೇ ಕಂತಿನ ರಾಜ್ಯದ ಪಾಲಿನ ಹಣವನ್ನು ರಾಜ್ಯದ ಕೊಡಗು ಮತ್ತು ತುಮಕೂರು ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**1.ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ-12022: 1:2006 ಎಸ್‌ಜಿಎಸ್‌ವೈ (10) ದಿನಾಂಕ:02.05.2006.

2. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 20 ಎಸ್‌ಜೆವೈ 2006, ದಿನಾಂಕ:19.05.2006.

3. ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ: ಜೆ-12022:1:2006 ಎಸ್‌ಜಿಎಸ್‌ವೈ (48) ದಿನಾಂಕ:27.11.2006.

**ಪ್ರಸ್ತಾವನೆ:**

ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಮೇಲೆ ಓದಲಾದ (1) ಮತ್ತು (2)ರಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಮೊದಲನೇ ಕಂತಿನ ಹಣ ರೂ.22,22,51,000 ಮತ್ತು ರೂ.7,40,85,000 ಗಳನ್ನು ಕ್ರಮವಾಗಿ ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಿವೆ. ಕೇಂದ್ರ ಸರ್ಕಾರವು ಎಸ್‌ಜಿಎಸ್‌ವೈ ಯಡಿ ಎರಡನೇ ಕಂತಿನ ಹಣ ರೂ.1,44,72,000 (ಒಂದು ಕೋಟಿ ನಲವತ್ನಾಲ್ಕು ಲಕ್ಷದ ಎಪ್ಪತ್ತೆರಡು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಕೊಡಗು ಮತ್ತು ತುಮಕೂರು ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದೆ. ಅದಕ್ಕನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನ ರೂ.48,24,000 (ನಲವತ್ತೆಂಟು ಲಕ್ಷದ ಇಪ್ಪತ್ನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಬೇಕಾಗಿತ್ತು. ಆದರೆ, ರಾಜ್ಯದ ಆಯವ್ಯಯದಲ್ಲಿ ಒದಗಿಸಿದ ಅನುದಾನದಲ್ಲಿ ಲಭ್ಯವಿರುವ ಅನುದಾನ ರೂ.40,38,667 (ನಲವತ್ತು ಲಕ್ಷದ ಮೂವತ್ತೆಂಟು ಸಾವಿರದ ಆರುನೂರ ಅರವತ್ತೇಳು ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 20 ಎಸ್‌ಜೆವೈ 2006, ಬೆಂಗಳೂರು, ದಿನಾಂಕ:25ನೇ ಜನವರಿ, 2007**

ರಾಜ್ಯ ಸರ್ಕಾರವು ಕೊಡಗು ಮತ್ತು ತುಮಕೂರು ಜಿಲ್ಲಾ ಪಂಚಾಯತ್‌ಗಳಿಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ಎರಡನೇ ಕಂತಿನ ಹಣ ರೂ.40,38,667 (ನಲವತ್ತು ಲಕ್ಷದ ಮೂವತ್ತೆಂಟು ಸಾವಿರದ ಆರುನೂರ ಅರವತ್ತೇಳು ರೂಪಾಯಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿಲ್ಲಾ ಪಂಚಾಯತಿ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡಬೇಕಿದ್ದ ಎರಡನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ |
|---|---|---|---|---|---|---|
| 1. | ಕೊಡಗು | 411 | 1200ZZ0001 | 17,99,000 | 5,99,667 | 5,99,667 |
| 2. | ತುಮಕೂರು | 406 | 0800ZZ0001 | 1,26,73,000 | 42,24,333 | 34,39,000 |
| | **ಒಟ್ಟು** | | | **1,44,72,000** | **48,24,000** | **40,38,667** |

ಷರತ್ತುಗಳು ಈ ಕೆಳಗಿನಂತಿವೆ:

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗ ಸೂಚಿಯಂತೆ ಹಣವನ್ನು ಉಪಯೋಗಿಸುವುದು. ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದಲ್ಲಿ ನಡುವೆ 75: 25ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕ ಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು-198-ಗ್ರಾಮ-ಪಂಚಾಯತ್‌ಗಳಿಗೆ ಸಹಾಯ-6-ಗ್ರಾಮ ಪಂಚಾಯತ್‌ಗಳು-01 ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2006-2007 (2501-01-198-6-01)ರಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 7 ಜಡ್‌ಪಿಎ 2003 ದಿನಾಂಕ:14.07.2005 ರನ್ವಯ ಖಜಾನೆಯಿಂದ ಅನುದಾನ ಪಡೆದು ಎಸ್‌ಜಿಎಸ್‌ವೈಯಡಿ ತೆರೆದಿರುವ ಗ್ರಾಮ ಪಂಚಾಯತ್‌ಗಳ ಬ್ಯಾಂಕ್ ಖಾತೆಗೆ ಚೆಕ್ ಮೂಲಕ ಬಿಡುಗಡೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿ ಗ್ರಾಮ ಪಂಚಾಯತಿಗಳ ಸಂಬಂಧಿಸಿದ ಬ್ಯಾಂಕ್ ಖಾತೆಗೆ ಅನುದಾನ ಜಮೆ ಮಾಡುವ ಬಗ್ಗೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಮಾಡುವುದು.

2006-2007ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತ್ತು ಭೌತಿಕ ಸಾಧನೆಯ ಪ್ರತಿ ಮಾಹೆಯ ಪ್ರಗತಿ ವರದಿಯನ್ನು ಮುಂದಿನ ತಿಂಗಳ 10ನೇ ತಾರೀಖಿನೊಳಗೆ ಆನ್‌ಲೈನ್ ಮೂಲಕ ನಿರ್ದೇಶಕರು (ಸ್ವಉಕಾ), ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಅಪರ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ ಗ್ರಾಅಪ 565 ಪಿಬಿಎಸ್ 2006 ದಿನಾಂಕ:20.01.2007 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಶಾಂತರಾಜ್**

ಪಿ.ಆರ್. 329

ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಅಪರ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ವಿಷಯ:** ಶ್ರೀ ಶಿವದೇವ ಶಾಸ್ತ್ರಿ, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ, ತಾಲ್ಲೂಕು ಪಂಚಾಯತ್, ಚಿಂಚೋಳಿ, ಗುಲ್ಬರ್ಗಾ ರವರು ಸಲ್ಲಿಸಿರುವ ಮೇಲ್ಮನವಿ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 265 ಇಎನ್‌ಕ್ಯೂ 93 ದಿನಾಂಕ: 22.05.1996.

2. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 109 ವಿಸೇಬಿ 96 ದಿನಾಂಕ:06.03.2003, 31.03.2006.

3. ಶ್ರೀ ಶಿವದೇವ ಶಾಸ್ತ್ರಿ, ಇವರು ಸಲ್ಲಿಸಿದ ಮನವಿ ದಿನಾಂಕ:01.07.2006.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಶ್ರೀ ಶಿವದೇವಶಾಸ್ತ್ರಿ, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ, ತಾಲ್ಲೂಕು ಪಂಚಾಯತ್, ಚಿಂಚೋಳಿ, ಜಿಲ್ಲೆ ಗುಲ್ಬರ್ಗಾ ರವರು 1996ನೇ ಸಾಲಿನಲ್ಲಿ ಕ್ಷೇತ್ರಾಭಿವೃದ್ಧಿ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿರುವಾಗ, ಚಿಂಚೋಳಿ ತಾಲ್ಲೂಕಿನ ಮೋಘಾ ಮಂಡಲ ಪಂಚಾಯಿತಿಯಲ್ಲಿ ಜವಾಹರ ರೋಜಗಾರ ಯೋಜನೆಯಡಿ ನಡೆದಿರುವ ಅವ್ಯವಹಾರದ ಕುರಿತು ಇಲಾಖಾ ವಿಚಾರಣೆ ನಡೆಸಲು, ವಿಭಾಗಾಧಿಕಾರಿಗಳು, ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು.

ಈ ಪ್ರಕರಣದ ಕುರಿತು ವಿಚಾರಣಾಧಿಕಾರಿಗಳು ನಿಯಮಾನುಸಾರ, ವಿಚಾರಣೆ ನಡೆಸಿ, ದಿನಾಂಕ:08.05.2001 ರಲ್ಲಿ ಸರ್ಕಾರಕ್ಕೆ ವಿಚಾರಣಾ ವರದಿ ಸಲ್ಲಿಸಿದ್ದು, ಸದರಿ ವರದಿಯನ್ನು ಪರಿಶೀಲಿಸಿ ಆಪಾದಿತರ ವಿರುದ್ಧದ ಆರೋಪಗಳು ಸಾಬೀತಾಗಿರುವುದು ಕಂಡು ಬಂದಿದ್ದರಿಂದ, ಅವರಿಗೆ ದಿನಾಂಕ:15.06.2001ರಂದು ವಿಚಾರಣಾ ವರದಿಯೊಂದಿಗೆ 2ನೇ ಕಾರಣ ಕೇಳುವ ನೋಟೀಸ್ ಜಾರಿ ಮಾಡಲಾಗಿತ್ತು. ಅದಕ್ಕೆ ಉತ್ತರವಾಗಿ ಶ್ರೀ ಶಿವದೇವಶಾಸ್ತ್ರಿ, ರವರು ದಿನಾಂಕ:24.08.2001 ರಂದು ತಮ್ಮ ರಕ್ಷಣಾ ಹೇಳಿಕೆ ನೀಡಿದ್ದರು. ಶ್ರೀ ಶಿವದೇವ ಶಾಸ್ತ್ರಿ, ಇವರ ರಕ್ಷಣಾ ಹೇಳಿಕೆ ಹಾಗೂ ವಿಚಾರಣಾಧಿಕಾರಿಗಳ ವರದಿಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಪಡೆದ ನಂತರ, ಕ್ರಮಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಈ ಕೆಳಗಿನಂತೆ ದಂಡನೆ ವಿಧಿಸಲಾಯಿತು.

"ಶ್ರೀ ಶಿವದೇವಶಾಸ್ತ್ರ ರವರಿಂದ ಸರ್ಕಾರಕ್ಕೆ ಉಂಟಾದ ನಷ್ಟದ ಮೊತ್ತ ರೂ.43,777-00 ನ್ನು ಬಡ್ಡಿ ಸಹಿತ ಅವರ ನಿವೃತ್ತಿ ಸೌಲಭ್ಯದ ಮೊತ್ತದಿಂದ ವಸೂಲಿ ಮಾಡಲು ಹಾಗೂ ಅವರ ಕರ್ತವ್ಯಲೋಪಕ್ಕಾಗಿ ನಿವೃತ್ತಿ ವೇತನದಲ್ಲಿ ಮಾಹೆಯಾನ ರೂ.100-00 ನ್ನು ಮೂರು ವರ್ಷಗಳ ಅವಧಿಗೆ ತಡೆಹಿಡಿಯುವುದು".

ಶ್ರೀ ಶಿವದೇವ ಶಾಸ್ತ್ರಿ ರವರು ಅವರಿಗೆ ವಿಧಿಸಲಾಗಿದ್ದ ದಂಡನೆ ಆದೇಶದ ವಿರುದ್ಧ ಕ್ರಮ ಸಂಖ್ಯೆ (3)ರಲ್ಲಿ ಓದಲಾದಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ಅವಕಾಶದನ್ವಯ ಘನತೆವೆತ್ತ ಕರ್ನಾಟಕ ರಾಜ್ಯ ಪಾಲರವರಿಗೆ,

ಮೇಲ್ಮನವಿ ಸಲ್ಲಿಸಿ, ಅವರಿಗೆ ವಿಧಿಸಲಾಗಿರುವ ದಂಡನೆಯನ್ನು ಕೈಬಿಡಲು ಕೋರಿದ್ದರು. ಪ್ರಕರಣದ ವಾಸ್ತವಾಂಶಗಳನ್ನು ಕೂಲಂಕಶವಾಗಿ ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರವು ಈ ಕೆಳಗಿನಂತೆ ಆದೇಶಿಸಿದೆ;

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 71 ವಿಸೇಬಿ 2006, ಬೆಂಗಳೂರು, ದಿನಾಂಕ:5ನೇ ಫೆಬ್ರವರಿ, 2007**

I have considered the appeal petition under Rule-18 of KCS (CCA) Rules 1957, submitted by Shri Shivadev Shastry, retired Tahsildar, Gulbarga against the orders Dated:06.03.2003 and 31.03.2006 of Government imposing the penalty of recovery of 43,777-00 along with interest from his pensionery claims and to withhold a sum of Rs.100/- per month from his pension for a period of three years. I have considered the appeal in the light of the Contentions made in the appeal petition and the connected inquiry records and the appeal records.

Having gone through the records and carefully considering the grounds advanced by the appellant, I find that his contentions do not hold water. Punishment is as a whole, very mild considering the nature of the offence. I threfore dismiss the appeal petition and uphold the orders of Government as Disciplinary Authority.

Sd/-
**T.N. CHATURVEDI**
Governor of Karnataka.

ಈ ಪ್ರಕರಣದಲ್ಲಿ ಮೇಲ್ಮನವಿ ಪ್ರಾಧಿಕಾರವು ಮೇಲ್ಕಂಡಂತೆ ಆದೇಶಿಸಿರುವ ಹಿನ್ನೆಲೆಯಲ್ಲಿ ಆಪಾದಿತರಾದ, ಶ್ರೀ ಶಿವದೇವ ಶಾಸ್ತ್ರಿ, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ, ಚಿಂಚೋಳಿ, ಪ್ರಸ್ತುತ ನಿವೃತ್ತ ತಹಶೀಲ್ದಾರ್ ರವರು ಘನವೆತ್ತ ರಾಜ್ಯಪಾಲರಿಗೆ ಸಲ್ಲಿಸಿರುವ ಮೇಲ್ಮನವಿಯನ್ನು ತಿರಸ್ಕರಿಸಲ್ಪಟ್ಟಿದ್ದು ಸದರಿಯವರಿಗೆ ಆದೇಶ ಸಂಖ್ಯೆ: ಗ್ರಾಅಪ 109 ವಿಸೇಬಿ 96 ದಿನಾಂಕ:31.03.2006ರಲ್ಲಿ ಸರ್ಕಾರವು ವಿಧಿಸಿದ ದಂಡನೆಯನ್ನು ಸ್ಥಿರಿಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಯು. ಶಿವಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

ಪಿ.ಆರ್. 330

## EDUCATION SECRETARIAT

**Sub:** Extension of Pension and other monitory benefits to the Teachers/ Librarians and Physical Education Teachers of Universities, Aided Regional Engineering and First Grade Colleges in the State who have retired during the period from 01.01.1996 to 31.03.1998 regarding.

**Read:**
1. Government Order No.ED 100 UNE 99 Dated15.11.99 and No.ED 188 DCE 88 Dated:15.11.99.
2. Government Order No.ED 183 DCE 99 Dated:29.07.2000.
3. Government Order No.ED 100 UNE 2000 Dated:08.08.2000.
4. Government Order No. FD (SPI) 1 PET 99 Dated:15.02.99.
5. High Court Judgement Dated:06.10.2001 passed in W.P. No.8793 of 2001 and other connected cases.
6. Write Appeal No.367/ 2002 and other connected cases on the file of Divisional Bench of the Hon'ble High Court-judgement Dated:11.03.2004.
7. Supreme Court Judgement Dated:12.05.2006 passed in C.A. No.1389 of 2006 together with connected C.A. No.1390-1395 and 1865 of 2006.
8. Supreme Court Contempt Case 199 of 2006.
9. Government Order No.ED 275 UPC 2004 Dated:13.11.2006.
10. accountant General (A&E) letter No. PM/GI/ F-100/ 2006-07/ 587 Dated:11.12.2006.

**Preamble:**

The State Government by it sorders Dated: 15.11.99 read under reference (1) above has extended UGC pay scales to the Teachers, Librarians and Physical Education Directors in the Universities, Aided Regional Engineering Colleges and First Grade Aided Colleges in the State with effect from 01.01.96. In the mean while the State Government by its Order Dated:15.02.99 read above (4) has revised the pensionary benefits including family pensions benefits retrospectively from 01.04.98 to all the Government Servants and also made applicable to the U.G.C. pay scale holders. However, in Government Order Dated:29.07.2000 read above under reference (2) has introduced paragraph 27-A to the Government Order No.ED 188 DCE 88 Dated: 15.11.99 which is read as follows:

(i) UGC scales as revised from 01.01.96 have been linked to the index level of 1510 points inasmuch as the revised pay scale structured includes the DA admissible as on 01.01.96 to the extent of 138% of basic pay. As on 01.01.96 the pensionary benefits under the State Government has not been revised. The revised pay scale of the State Government employees came into force from 01.04.98 by merging the DA as on 01.01.96. The pensionary benefits were also simulataneously revised w.e.f. 01.04.98. Therefore, the revised pay drawn in the UGC pay scales for the period from 01.01.96 upto 31.03.98 shall not be taken as empluments for the purpose of pensionary benefits. Accordingly;

(a) In respect of teachers drawing UGC pay scales who have retired during the period from 01.01.96 to 31.03.98 they shall be eligible for the benefit of the fixation of pay and arrears under the revised UGC scales of pay only. There shall not be any change in their pensionary benefits with reference to the revised UGC pay and the retirement benefits already sanctioned in the prerevised UGC pay scales will not undergo any modifications. However, they shall be entitled to the benefit of fixation of revised pension/ family pension as contemplated in Goivernment Order No. FD (Spl) 2 PET 99 Dated: 15.02.99 only w.e.f. 1st April 1998. Para 6 of Government Order No.FD (Spl.) 2 PET 99 Dated:15.02.99 stand modified to this extent.

(b) In respect of teachers drawing UGC pay scales and who have issue on or after 01.04.98. the pay drawn inthe revised UGC pay scales shall be counted for the purpose of pensionary benefits and the orders revising the pensionary benefits vide Government Order No.FD (Spl.) 1 PET 99 Dated:15.02.99 shall be made applicable."

Similarly an amemdment was also made in respect of the Regional Engineering Colleges by inserting para 31-A vide Government Order Dated:08.08.2000 read under reference (3) above. The undisputed facts issued in Government Orders Dated:29.07.2000 and 08.08.2000 were challenged before the Hon'ble High Court of Karnataka in W.P. Nos.read above under reference (5). The learned single judge was pleased to allow there Writ Petitions and set aside the Government Orders Dated:29.07.2000 and 08.08.2000. Aggrieved by the said Court Order the State Government preferred Writ Appeal Nos 367/ 2002 and connected appeals before the Divisional Bench of the Hon'ble High Court of Karnataka. The Divisional Bench in its common jugdement Dated:11.03.2004 read above under reference (6) was pleased to allow the writ appeal and set aside the order Dated:06.10.2001 passed by the learned single judge of the High Court of Karnataka.

Aggrieved by the order Dated:11.03.2004 the petitioners preferred S.L.P. and there after they were numbered as Civil Appeals No.1389 of 2006, 1390-1395 of 2006 and 1865 of 2006 on the file of Supreme Court of India. The Hon'ble Court after hearing both sides on merits of the cases was pleased to allow the said Civil Appeals and delivered judgement on 12.05.2006 set asiding the order Dated:11.03.2004 of the Divisional Bench with an observation stating that, the persons similarly situated cannot be discriminated against.

After considering the judgement, the Government have issued orders in Government Order Dated:13.11.2006 read at (9) above,extending the monitory benefits to the Teachers/ Librarians and Physical Education Teachers of Universities, Aided Regional Engineering Colleges and Aided First Grade Colleges in the State, who have retired during the period from 01.01.1996 to 31.03.1998 and the quantum of their pensionary benefits have to be computed onthe basis of 50% of the last pay drawn in terms of the rule 296 of K.C.S.R. Rules, 1958.

Accountant General in his letter Dated:11.12.2006 read at (10) above has stated that as per Government Order No. FD (Spl.) 2 PET Dated: 15.02.99 in respect of Government servants who retired/ died prior to 01.04.98, the pension/ family pension already sanctioned shall have to be consolidated with effect from 01.04.98 reckoning.

(i) basic pension/ family pension as on 01.04.98.

(ii) DA as on 01.01.1996 and

(iii) add extra @ 32.5% of basic pension/ family pension.

and requested to reexamine the issue and communicate the views of the Government for taking further action regarding refixation of pensionary benefits of these categories of cases.

In view of the Accountant General's observation and clarification sought in this behalf, Governemnt have re-examined the issue and decided to modify the Government Order Dated:13.11.2006 read at (9) above and to omit para 27A of Government Order Dated:29.07.2000 read at (2) above and also to omit para 31A of Government Order Dated:08.08.2000 read at (3) above.

Accordingly the following order.

**Government Order No.ED 275 UPC 2004, Bangalore, Dated:8th February, 2007**

In the circumstances explained in the preamble, Government is pleased to order:

(1) Para 6 of Government Order No.ED 183 DCE 99 Dated:29.07.2000 is hereby omitted and para 7 of the said Government Order is renubered as para 6.

(2) Para 7 of Government Order No.ED 100 UNE 2000 Dated:08.08.2000 is hereby omitted and subsequent paras 8 and 9 are renumbered as 7 and 8 respectively.

(3) In partial modification of order No.ED 275 UPC 2004 Dated:13.11.2006, Government is also pleased to order for extension of the benefits of fixation of revised pension/ family pension as contemplated in Government Order No.FD (Spl.) 2 PET 99 Dated:15.02.99 and other minitory benefits to the Teachers / Librarians and Physical Education Teachers of Universities, Aided Regional Engineering Colleges and Aided First Grade Colleges in the the State who have retired during the period from 01.01.1996 to 31.03.1998 shall be reckoned as emoluments for the purpose of calculation pensionary benefits under Rule 296 of K.C.S.R's.

This order issues with the concurrence of Finance Department vide U.O.Note No.FD 67 Ser.2/ 2007 Dated:29.01.2007.

By Order and in the name of the Governor of Karnataka,

PR-331

**M.P. MANJUNATH**

Under Secretary to Government,

Education Department.

**ಇಂಧನ ಸಚಿವಾಲಯ**

**ವಿಷಯ:** ಮೆ: ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ 250 ಕಿಲೊ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಂಇ 61 ಎನ್‌ಸಿಇ 2004, ದಿನಾಂಕ:13.02.2004.

2. ಸರ್ಕಾರಿ ಆದೇಶ ಸಂಖ್ಯೆ: ಇಂಇ 61 ಎನ್‌ಸಿಇ 2004 ದಿನಾಂಕ:22.03.2004.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/ 06/ ಹರಿಹರ/ 2006/ 2553 ದಿನಾಂಕ:15.12.2006.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ: ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ದಾವಣಗೆರೆ ಜಿಲ್ಲೆಯ ದಾವಣಗೆರೆ ಬ್ರಾಂಚ್ ಕೆನಾಲ್‌ನ ಭದ್ರ ಬಲದಂಡೆ ಕಾಲುವೆಯಲ್ಲಿ 200 ಕಿಲೊ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಆದೇಶದಲ್ಲಿ ಯೋಜನೆಯ ಸಾಮರ್ಥ್ಯವನ್ನು 200 ಕಿಲೊ ವ್ಯಾಟ್ ನಿಂದ 250 ಕಿಲೊ ವ್ಯಾಟ್‌ಗೆ ಹೆಚ್ಚಿಸಲಾಗಿದೆ.

ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 1 ಎನ್‌ಸಿಇ 2007, ಬೆಂಗಳೂರು, ದಿನಾಂಕ:14ನೇ ಫೆಬ್ರವರಿ, 2007**

ಸರ್ಕಾರವು ಮೆ: ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಾವಣಗೆರೆ ಬ್ರಾಂಚ್ ಕೆನಾಲ್‌ನ ಭದ್ರ ಬಲದಂಡೆ ಕಾಲುವೆಯಲ್ಲಿ 250 ಕಿಲೊ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 21.03.2007 ರಿಂದ ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ.

ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 337

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.